# Education as a Social Function

## ಅಧ್ಯಾಯ ಎರಡು: ಸಾಮಾಜಿಕ ಕಾರ್ಯಾಚರಣೆಯಾಗಿ ಶಿಕ್ಷಣ

**1. ಪರಿಸರದ ಅರ್ಥ ಮತ್ತು ಸ್ವರೂಪ.** ಒಂದು ಸಮುದಾಯ ಅಥವಾ ಸಾಮಾಜಿಕ ಗುಂಪು ನಿರಂತರ ಸ್ವಯಂ-ನವೀಕರಣದೊಂದಿಗೆ ಅಥವಾ ತಾನೇ ಮತ್ತೆ ಹೊಸದಾಗುವ ಮೂಲಕ ಮುನ್ನಡೆಯುವುದನ್ನು ನಾವು ನೋಡಿದ್ದೇವೆ. ಸಮುದಾಯದಲ್ಲಿರುವ ಅಪಕ್ವ ಅಥವಾ ಕಿರಿಯ(immature) ಸದಸ್ಯರು ಶೈಕ್ಷಣಿಕವಾಗಿ ಬೆಳೆಯುವುದರ ಮೂಲಕ ಈ ಪುನರುಜ್ಜೀವನ ಸಾಧ್ಯವಾಗುತ್ತದೆ. ಹಲವಾರು ಸಾಂಸ್ಥಿಕ-ವೈಚಾರಿಕ ರಚನೆಗಳೊಂದಿಗೆ ಒಬ್ಬರಿಗೊಬ್ಬರು ಹೊಸಬರಂತಿದ್ದು, ಅಪರಿಚಿತರಂತೆ ಕಂಡುಬರುವ ಹಲವಾರು ವ್ಯಕ್ತಿಗಳನ್ನು ಈ ಸಮಾಜ ಉದ್ದೇಶಪೂರ್ವಕವಾಗಿ ಹಾಗೂ ಉದ್ದೇಶವಿಲ್ಲದೆಯೇ ತನ್ನ ಸಂಪನ್ಮೂಲಗಳನ್ನು ಮತ್ತು ಆದರ್ಶಗಳನ್ನು ಪ್ರತಿನಿಧಿಸುವ ಸಶಕ್ತ ಹೊಣೆಗಾರರನ್ನಾಗಿ ಪರಿವರ್ತಿಸುತ್ತದೆ. ಹಾಗಾಗಿ ಶಿಕ್ಷಣ ಎನ್ನುವುದು ಸಲಹುವ, ಪೋಷಿಸಿ ಬೆಳೆಸುವಂತಹ ಒಂದು ಪ್ರಕ್ರಿಯೆಯಾಗಿದೆ. ಈ ಎಲ್ಲ ಮಾತುಗಳು ಬೆಳವಣಿಗೆಯ ಸ್ಥಿತಿಗಳತ್ತ ಗಮನ ನೀಡಬೇಕೆಂಬುದನ್ನು ಸೂಚಿಸುತ್ತವೆ. ಪಾಲಿಸಿ, ಮೇಲಕ್ಕೆತ್ತಿ, ವಿದ್ಯಾಭ್ಯಾಸ ಕೊಡುವುದರ ಕುರಿತೂ ನಾವಿಲ್ಲಿ ಹೇಳುತ್ತಿದ್ದೇವೆ. ಈ ಶಬ್ದಗಳು ವಿವಿಧ ಹಂತಗಳಲ್ಲಿ ಶಿಕ್ಷಣದ ಹರವನ್ನು ತೋರಿಸುತ್ತವೆ. ಪದದ ವ್ಯುತ್ಪತ್ತಿಯ ದೃಷ್ಟಿಯಿಂದ 'ಎಜುಕೇಶನ್'("ಶಿಕ್ಷಣ") ಎಂದರೆ ಮುನ್ನಡೆಯುವುದು ಅಥವ ಬೆಳೆಸುವುದು ಎಂದಾಗುತ್ತದೆ. ನಾವು ಈ ಪ್ರಕ್ರಿಯೆಯ ಪರಿಣಾಮವನ್ನು ಗಮನದಲ್ಲಿಟ್ಟುಕೊಂಡು ನೋಡಿದಾಗ ಶಿಕ್ಷಣವು ರೂಪಿಸುವ, ಸಂಯೋಜಿಸುವ, ಎರಕಹೊಯ್ಯುವ ಕಾರ್ಯವಾಗಿದೆ ಎನ್ನಲಡ್ಡಿಯಿಲ್ಲ- ಅಂದರೆ ಅದು ಒಂದು ಗುಣಮಟ್ಟದ ಸಾಮಾಜಿಕ ಚಟುವಟಿಕೆಯನ್ನು ರೂಪಿಸುವ ಕ್ರಿಯೆಯಾಗಿದೆ. ಒಂದು ಸಮುದಾಯ ಅಥವಾ ಸಾಮಾಜಿಕ ತಂಡ, ತನ್ನ ಅಪಕ್ವ ಸದಸ್ಯರಿಗೆ ತನ್ನದೇ ಆದ ಸಾಮಾಜಿಕ ರೂಪವನ್ನು ನೀಡುವ ವಿಶಿಷ್ಟ ಹಾದಿಯ ಲಕ್ಷಣಗಳ ಒಂದು ಸಾಮಾನ್ಯ ಚಿತ್ರಣವನ್ನು ನೀಡುವುದು ಈ ಅಧ್ಯಾಯದಲ್ಲಿ ನಮ್ಮ ಕಾಳಜಿಯಾಗಿದೆ.

ಸಂಘ ಜೀವನದ ಆಸಕ್ತಿ, ಉದ್ದೇಶ, ಮತ್ತು ಕಲ್ಪನೆಗಳಲ್ಲಿನ ಅನುಭವದ ಸ್ವರೂಪವು ರೂಪಾಂತರಗೊಳ್ಳಬೇಕಾದ ಆವಶ್ಯಕತೆಯಿದೆ. ಇದು ಕೇವಲ ದೈಹಿಕವಾಗಿ ರೂಪುಗೊಳ್ಳುವ ವಿಷಯ ಅಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ವಸ್ತುಗಳನ್ನು ಭೌತಿಕವಾಗಿ ಸಾಗಿಸಬಹುದು; ಅವುಗಳನ್ನು ಶಾರೀರಿಕವಾಗಿ ತಲುಪಿಸಬಹುದು. ನಂಬಿಕೆ ಮತ್ತು ಮಹತ್ವಾಕಾಂಕ್ಷೆಗಳನ್ನು ದೈಹಿಕವಾಗಿ ಹೊರತೆಗೆದು ಸೇರಿಸಲಾಗದು. ಹಾಗಾದರೆ ಅವುಗಳ ಸಂವಹನ ಹೇಗೆ ಸಾಧ್ಯ? ಮನಮುಟ್ಟುವುದು ಅಥವ ಅಕ್ಷರಶಃ ಮನಸ್ಸಿನಲ್ಲಿ ಅಚ್ಚೊತ್ತುವುದು ಅಸಾಧ್ಯವೆಂದಾದಾಗ, ಚಿಕ್ಕವರು ದೊಡ್ಡವರ ದೃಷ್ಟಿಕೋನವನ್ನು ಮೈಗೂಡಿಸಿಕೊಳ್ಳಲು ಸಾಧ್ಯವಾಗುವಂತಹ ಅಥವ ಹಿರಿಯರು ತಮ್ಮ ಮನಸ್ಥಿತಿಯೊಡನೆ ಕಿರಿಯರು ಬೆರೆಯುವಂತೆ ಮಾಡುವ ಬಗೆಯನ್ನು ಕಂಡುಹಿಡಿಯುವುದು ನಮ್ಮ ಸಮಸ್ಯೆಯಾಗಿದೆ. ಒಟ್ಟಿನಲ್ಲಿ ಇದನ್ನು ಸಮೀಕರಿಸಿ ಹೇಳಬೇಕೆಂದರೆ, ಇದು ಆಗುವುದು ನಿರ್ದಿಷ್ಟ ಪ್ರತಿಕ್ರಿಯೆಗಳನ್ನು ನೀಡುವಂತೆ ಮಾಡುವ ಪರಿಸರದ ಕಾರ್ಯದಿಂದಲೇ. ನಮಗೆ ಬೇಕಾದ ನಂಬಿಕೆಗಳನ್ನು ಮೊಳೆ ಹೊಡೆದು ಸೇರಿಸಲಾಗದು, ಹಾಗೆಯೇ ಬೇಕಾದ ವರ್ತನೆಯನ್ನು ಅಂಟಿಸಲೂ ಆಗದು. ಯಾವ ನಿರ್ದಿಷ್ಟ ಮಾಧ್ಯಮದಲ್ಲಿ ವ್ಯಕ್ತಿ ಇರುತ್ತಾನೋ ಅದು ಅವನನ್ನು ನಿರ್ದಿಷ್ಟ ರೀತಿಯಲ್ಲಿ ನೋಡುವಂತೆ, ಅನುಭವಿಸುವಂತೆ ಮಾಡುತ್ತದೆಯೇ ಹೊರತೂ ಬೇರೊಂದು ಬಗೆಯಲ್ಲಿ ಅಲ್ಲ. ಅದು ಬೇರೆಯವರೊಂದಿಗೆ ಯಶಸ್ವಿಯಾಗಿ ನಡೆದುಕೊಳ್ಳಲು ಸಹಾಯವಾಗುವಂತೆ ಕೆಲವು ಯೋಜನೆಗಳನ್ನು ರೂಪಿಸಿಕೊಳ್ಳುವಂತೆ ಅವನನ್ನು ತಯಾರು ಮಾಡುತ್ತದೆ.

ಬೇರೆಯವರೊಂದಿಗೆ ಯಶಸ್ವಿಯಾಗಿ ಒಡನಾಡಲು ಅನುಕೂಲವಾಗುವಂತೆ ಅದು ಅವನಲ್ಲಿ ಕೆಲವು ನಂಬಿಕೆಗಳನ್ನು ಗಟ್ಟಿಗೊಳಿಸುತ್ತದೆ ಹಾಗೆಯೇ ಬೇರೆಯವರ ಸಮ್ಮತಿ ಪಡೆಯಲು ಸಹಾಯವಾಗುವಂತೆ ಕೆಲವನ್ನು ದುರ್ಬಲಗೊಳಿಸುತ್ತದೆ. ಇದು ಕ್ರಮೇಣ ಅವನಲ್ಲಿ ಒಂದು ನಿರ್ದಿಷ್ಟ ನಡವಳಿಕೆಯ ವ್ಯವಸ್ಥೆಯನ್ನು ಉಂಟುಮಾಡುತ್ತದೆ, ಒಂದು ಕ್ರಿಯಾವಿಧಾನವನ್ನು, ಮನೋಭಾವವನ್ನು ಮೂಡಿಸುತ್ತದೆ. "ಪರಿಸರ" ಮತ್ತು "ಮಾಧ್ಯಮ" ಈ ಶಬ್ದಗಳು ವ್ಯಕ್ತಿಯನ್ನು ಆವರಿಸಿರುವ ಪರಿಸರಕ್ಕಿಂತ ಹೆಚ್ಚಿನದನ್ನು ಹೇಳುತ್ತವೆ. ಸುತ್ತಲಿನ ಪರಿಸರವು ಆತನ ಸಕ್ರಿಯವಾದ ಪ್ರವೃತ್ತಿಯ ನಿರ್ದಿಷ್ಟ ಮುಂದುವರಿಕೆಯಾಗುವುದನ್ನು ಇವು ಸೂಚಿಸುತ್ತವೆ. ಒಂದು ನಿರ್ಜೀವ ವಸ್ತುವಿನ ಅಸ್ತಿತ್ವ ಅದರ ಪರಿಸರದೊಂದಿಗೆ ಮುಂದುವರಿಯುತ್ತದೆ. ಆದರೆ ಅದು, ಪರಿಸರದ ಭಾಗವಾಗಿ ಉಳಿಯುವುದು ಕೇವಲ ರೂಪಕವಾಗಿ ಮಾತ್ರ. ಆದರೆ ಸುತ್ತಲಿನ ಪರಿಸ್ಥಿತಿ ಹಾಗಲ್ಲ. ತನ್ನ ಮೇಲೆ ಪ್ರಭಾವ ಬೀರುವ ಅಂಶಗಳ ಕುರಿತು ನಿರ್ಜೀವ ವಸ್ತುವು ಕಾಳಜಿ ತೋರಿಸಲಾರದು. ಇನ್ನೊಂದೆಡೆ ಸಜೀವಿಗಳಿಗೆ, ಅದರಲ್ಲೂ ವಿಶೇಷವಾಗಿ ಮಾನವರಿಗೆ, ಕಾಲ ದೇಶಗಳ (Time and Space) ದೃಷ್ಟಿಯಿಂದ ಆತನ ಹತ್ತಿರದಲ್ಲಿರುವ ವಸ್ತುಗಳಿಗಿಂತಲೂ ದೂರದಲ್ಲಿರುವ ವಸ್ತುಗಳು ನಿಜವಾದ ಅರ್ಥದಲ್ಲಿ ಅವನ ಪರಿಸರವಾಗಿ ರೂಪುಗೊಳ್ಳಬಹುದು. ಯಾವ ವಸ್ತುಗಳಿಗೆ ಅನುಗುಣವಾಗಿ ಮನುಷ್ಯನೂ ಬದಲಾವಣೆ ಹೊಂದುತ್ತಾನೋ ಅವು ಆತನ ನಿಜವಾದ ಪರಿಸರವಾಗುತ್ತವೆ. ಹೀಗೆ ಖಗೋಳಶಾಸ್ತ್ರಜ್ಞ ವೀಕ್ಷಿಸುವ ಅಥವ ಲೆಕ್ಕಾಚಾರ ಮಾಡುವ ನಕ್ಷತ್ರಗಳಿಗೆ ಅನುಗುಣವಾಗಿ ಆತನ ಚಟುವಟಿಕೆಗಳು ಬದಲಾಗುತ್ತವೆ. ಆತನ ಸುತ್ತುಮುತ್ತಲಿನ ವಸ್ತುಗಳಲ್ಲಿ ದೂರದರ್ಶಕವು ಆತನ ಅತ್ಯಂತ ನಿಕಟವಾದ ಪರಿಸರವಾಗುತ್ತದೆ. ಪ್ರಾಚೀನ ಯುಗದ ಮಾನವನ ಜೀವನ, ಅವಶೇಷಗಳು, ಶಾಸನ ಮೊದಲಾದವುಗಳನ್ನು ಪ್ರಾಚ್ಯಶಾಸ್ತ್ರವು ಒಳಗೊಂಡಿದ್ದು ಪ್ರಾಚ್ಯಶಾಸ್ತ್ರಜ್ಞ ಅವುಗಳ ಕುರಿತು ಕಾಳಜಿ ಹೊಂದಿದ್ದು, ಆ ಕಾಲಮಾನದೊಂದಿಗೆ ಆತ ಸಂಪರ್ಕ ಸ್ಥಾಪಿಸಲು ಅವುಗಳ ಮೂಲಕ ಸಾಧ್ಯವಾಗುವುದರಿಂದ, ಅವುಗಳು ಪ್ರಾಚ್ಯಶಾಸ್ತ್ರಜ್ಞನ ಪರಿಸರವಾಗುತ್ತವೆ.

ಒಟ್ಟಿನಲ್ಲಿ, ಪರಿಸರ ಎನ್ನುವುದು ಜೀವಿಗಳಿಗೆ ವಿಶಿಷ್ಟವಾದ ಚಟುವಟಿಕೆಗಳನ್ನು ಪ್ರೋತ್ಸಾಹಿಸುವ ಅxವಾ ಅವುಗಳಿಗೆ ತಡೆಯೊಡ್ಡುವ, ಉತ್ತೇಜಿಸುವ ಅಥವ ಪ್ರತಿರೋಧಿಸುವ ಪರಿಸ್ಥಿತಿಗಳನ್ನು ಹೊಂದಿರುತ್ತದೆ. ಮೀನಿಗೆ ನೀರೇ ಪರಿಸರ ಏಕೆಂದರೆ, ಮೀನಿನ ಚಟುವಟಿಕೆಗಳಿಗೆ, ಅದರ ಜೀವನಕ್ಕೆ, ನೀರೇ ಆಧಾರ. ಉತ್ತರ ಧ್ರುವವು ಧ್ರುವ ಪರಿಶೋಧಕನ ಪರಿಸರಕ್ಕೆ ಬಹಳ ಮುಖ್ಯವಾದ ಅಂಶವಾಗುತ್ತದೆ. ಆತ ತನ್ನ ಗುರಿ ತಲುಪುತ್ತಾನೋ ಇಲ್ಲವೋ, ಆದರೆ ಅದು ಆತನ ಚಟುವಟಿಕೆಗಳನ್ನು ನಿರ್ದೇಶಿಸುವುದರಿಂದ, ವೈಶಿಷ್ಟ್ಯಪೂರ್ಣಗೊಳಿಸುವುದರಿಂದ ಆತನ ಪರಿಸರದಲ್ಲಿ ಅದು ಮಹತ್ವಪೂರ್ಣ ಅಂಶವಾಗುತ್ತವೆ. ಬದುಕು ಕ್ರಿಯಾರಹಿತ ಅಸ್ತಿತ್ವವನ್ನು (ಅಂತಹ ಸಂಗತಿ ಇದೆ ಎಂದಾದರೆ) ಸೂಚಿಸುವುದಿಲ್ಲ: ಆದರೆ ಇದು ಸಕ್ರಿಯತೆಯನ್ನು ತೋರಿಸುತ್ತದೆ. ಆದ್ದರಿಂದ ಪರಿಸರ ಅಥವ ಮಾಧ್ಯಮಗಳು ಈ ಕ್ರಿಯೆಯ ಭಾಗವಾಗಿ ಆತನನ್ನು ಸದೃಢಗೊಳಿಸುವ ಅಥವ ಹತಾಶೆಗೆ ತರುವ ಸ್ಥಿತಿಯೆಡೆಗೆ ಕೊಂಡೊಯ್ಯುತ್ತವೆ.

**2. ಸಾಮಾಜಿಕ ಪರಿಸರ.** ಬೇರೆಯವರ ಒಡನಾಟವನ್ನು ಹೊಂದಿರುವ ಒಂದು ಜೀವಿಯ ಚಟುವಟಿಕೆಗಳಿಗೆ ಒಂದು ಸಾಮಾಜಿಕ ಪರಿಸರ ವಿರುತ್ತದೆ. ಆತ ಏನು ಮಾಡುತ್ತಾನೆ, ಏನು ಮಾಡಬಲ್ಲ ಎನ್ನುವುದು ಉಳಿದವರ ನಿರೀಕ್ಷೆ, ಬೇಡಿಕೆ, ಒಪ್ಪಿಗೆ ಹಾಗೂ ಹಳಿಯುವಿಕೆಯನ್ನು ಅವಲಂಬಿಸಿರುತ್ತದೆ. ಒಬ್ಬ ಮನುಷ್ಯ ಇನ್ನುಳಿದ ಮನುಷ್ಯರ ಜೊತೆಗೆ ಸಂಪರ್ಕದಲ್ಲಿದ್ದಾನೆ ಎಂದಾದರೆ, ಉಳಿದವರ ಚಟುವಟಿಕೆಗಳನ್ನು ಲೆಕ್ಕಕ್ಕೆ ತೆಗೆದುಕೊಳ್ಳದೇ ತನ್ನ ಚಟುವಟಿಕೆಗಳನ್ನು ಮಾಡುವುದು ಅಸಾಧ್ಯವಾಗುತ್ತದೆ. ಏಕೆಂದರೆ ತನ್ನ ಪ್ರವೃತ್ತಿಯನ್ನು ಸಾಕ್ಷಾತ್ಕರಿಸಿಕೊಳ್ಳಲು ಅವುಗಳು ಆತನ ಕಡೆಗಣಿಸಲಾಗದ ಅಗತ್ಯಗಳಾಗಿರುತ್ತವೆ. ಅವನ ಚಲನೆ ಪರಿಸ್ಥಿತಿಯನ್ನು ಪ್ರಚೋದಿಸುತ್ತದೆ ಮತ್ತು

ಅನುಗುಣವಾಗಿ ಪ್ರತಿಕ್ರಿಯಿಸುವಂತೆ ಮಾಡುತ್ತದೆ. ಹಾಗಿಲ್ಲದಿದ್ದರೆ ಒಬ್ಬ ವ್ಯಾಪಾರಸ್ಥಒಬ್ಬನೇ ಏಕಾಂಗಿಯಾಗಿ ಚಟುವಟಿಕೆಗಳನ್ನು ನಡೆಸುವುದು ಸಾಧ್ಯವಾಗುವಂತೆ, ತನ್ನಷ್ಟಕ್ಕೆ ತಾನೇ ಕೊಳ್ಳುವ ಮತ್ತು ಮಾರಾಟ ಮಾಡುತ್ತ ವ್ಯಾಪಾರ ಮಾಡುವುದನ್ನು ಊಹಿಸಿಕೊಂಡಂತೆ. ಒಬ್ಬ ಉತ್ಪಾದಕ ಏಕಾಂತದಲ್ಲಿ ಲೆಕ್ಕಾಚಾರದಲ್ಲಿ ಯೋಜನೆಗಳನ್ನು ರೂಪಿಸುವಾಗ ಆಗಲೀ, ತನ್ನ ಕಚ್ಚಾ ಸಾಮಗ್ರಿಗಳನ್ನು ಖರೀದಿಸುವಾಗ ಆಗಲೀ, ಅಥವ ತನ್ನ ತಯಾರಾದ ಉತ್ಪನ್ನಗಳನ್ನು ಮಾರುವಾಗ ಆಗಲೀ ಅವನ ಚಟುವಟಿಕೆಗಳು ನಿಜವಾದ ಅರ್ಥದಲ್ಲಿ ಸಾಮಾಜಿಕವಾಗಿ ನಿರ್ದೇಶಿಸಲ್ಪಟ್ಟಿರುತ್ತವೆ. ಇನ್ನೊಬ್ಬರ ಜೊತೆಯಲ್ಲಿ ಕೆಲಸ ನಿರ್ವಹಿಸಲು ಬೇಕಾದ ಚಿಂತನೆ ಮತ್ತು ಭಾವನೆಯೂ, ಬಹಿರಂಗವಾಗಿ ಪ್ರಕಟಿಸುವ ಸಹಕಾರ ಅಥವ ವಿರೋಧದ ರೀತಿಯದ್ದೇ ಆದ ಸಾಮಾಜಿಕ ನಡವಳಿಕೆಯ ಕ್ರಮವಾಗಿರುತ್ತದೆ.

ಸಾಮಾಜಿಕ ಮಾಧ್ಯಮವು ತನ್ನ ಕಿರಿಯ ಸದಸ್ಯರನ್ನು ಹೇಗೆ ಪೋಷಿಸುತ್ತದೆ ಎನ್ನುವುದನ್ನು ಇಲ್ಲಿ ವಿಶೇಷವಾಗಿ ಸೂಚಿಸಬೇಕಾಗಿದೆ. ಅವರ ಬಾಹ್ಯ ಅಭ್ಯಾಸ ಕ್ರಮಗಳನ್ನು ಅದು ಹೇಗೆ ರೂಪಿಸುತ್ತದೆಂಬುದನ್ನು ತಿಳಿಯುವುದು ಕಷ್ಟಕರವಲ್ಲ. ನಾಯಿ ಹಾಗು ಕುದುರೆಗಳು ಸಹ ಮನುಷ್ಯರೊಂದಿಗೆ ಒಡನಾಡುತ್ತಾ ತಮ್ಮ ಕ್ರಿಯೆಯಲ್ಲಿ ಮಾರ್ಪಾಡು ಮಾಡಿಕೊಂಡಿರುತ್ತವೆ; ಅವುಗಳ ನಡವಳಿಕೆ ಮಾನವರಿಗೆ ಸಂಬಂಧ ಪಟ್ಟದ್ದಾಗಿರುವುದರಿಂದ ಅವುಗಳು ಬೇರೆಯದೇ ತೆರನಾದ ನಡವಳಿಕೆಯನ್ನು ರೂಢಿಸಿಕೊಳ್ಳುತ್ತವೆ. ಪ್ರಾಣಿಗಳ ಮೇಲೆ ಪ್ರಭಾವ ಬೀರುವ ಸ್ವಾಭಾವಿಕ ಪ್ರಚೋದಕಗಳನ್ನು ನಿಯಂತ್ರಿಸುವ ಮೂಲಕ, ಇನ್ನೊಂದು ರೀತಿಯಲ್ಲಿ ಹೇಳುವುದಾದರೆ ನಿರ್ದಿಷ್ಟವಾದ ವಾತಾವರಣವನ್ನು ರೂಪಿಸುವ ಮೂಲಕ, ಮಾನವರು ಅವುಗಳನ್ನು ನಿಯಂತ್ರಿಸುತ್ತಾರೆ. ಕುದುರೆಗಳು ಸಹಜ ಅಥವ ಮೂಲ ಪ್ರವೃತ್ತಿಗನುಗುಣವಾಗಿ ನೀಡುವ ಪ್ರತಿಕ್ರಿಯೆಯನ್ನು ಆಹಾರ, ಕಡಿವಾಣ ಮತ್ತು ಲಗಾಮು, ಶಬ್ದಗಳು, ವಾಹನಗಳ ಮೂಲಕ ನಿರ್ದೇಶಿಸುತ್ತಾರೆ. ಕೆಲವು ನಿರ್ದಿಷ್ಟ ಕ್ರಿಯೆಗಾಗಿ ನಿರಂತರವಾಗಿ ನಿರ್ದೇಶಿಸಿದಾಗ ಕುದುರೆಗಳ ಮೂಲ ಪ್ರತಿಕ್ರಿಯೆಯೇ ಹಾಗಿದೆಯೇನೋ ಎನ್ನುವಂತೆ ಬದಲಾಗಿ, ಒಂದೇ ರೀತಿಯಲ್ಲಿ ಕೆಲಸ ಮಾಡುತ್ತಾ, ಅದು ಅವುಗಳ ನಡವಳಿಕೆಗಳಾಗಿ ರೂಪುಗೊಳ್ಳುತ್ತವೆ. ಒಂದು ವೇಳೆ ಇಲಿಯೊಂದನ್ನು ದಿಗ್ಭ್ರಮೆಯ ಗೋಜಲು ಮಾರ್ಗದ ಜಾಲವೊಂದರಲ್ಲಿ, ಚಕ್ರಪಥದಲ್ಲಿ(ಮೇಝ್) ಬಿಟ್ಟು ಅಲ್ಲಿ ಕೆಲವು ಕ್ರಮಾನುಗತಿಯಲ್ಲಿ ತಿರುವುಗಳಲ್ಲಿ ಹೋದ ನಂತರವೇ ಅದಕ್ಕೆ ಆಹಾರ ದೊರೆಯುವಂತೆ ಮಾಡಿದಾಗ, ಇಲಿಯ ಚಟುವಟಿಕೆಗಳು ಅದೇ ರೀತಿ ಕ್ರಮೇಣ ಪರಿವರ್ತನೆಗೊಳ್ಳುತ್ತವೆ. ಅದಕ್ಕೆ ಹಸಿವೆಯಾದಾಗ ಅಭ್ಯಾಸ ಬಲದಂತೆ ಆ ಹಾದಿಯನ್ನು ಹಿಡಿಯುತ್ತದೆಯೇ ಹೊರತೂ ಬೇರೆಯದನ್ನಲ್ಲ.

ಮನುಷ್ಯನ ಚಟುವಟಿಕೆಗಳೂ ಅದೇ ರೀತಿ ಪರಿವರ್ತನೆಗೊಂಡಿವೆ. ಸುಟ್ಟುಕೊಂಡ ಮಗು ಬೆಂಕಿಗೆ ಹೆದರುತ್ತದೆ. ಮಗು ನಿರ್ದಿಷ್ಟ ಆಟದ ಸಾಮಾನು ಮುಟ್ಟಿದಾಗ ಅದು ಸುಟ್ಟುಕೊಳ್ಳುವಂತಹ ಒಂದು ಪರಿಸ್ಥಿತಿಯನ್ನು ಹೆತ್ತವರು ನಿರ್ಮಿಸಿದರೆ, ಆ ಮಗು ಬೆಂಕಿಯನ್ನು ಮುಟ್ಟುವುದನ್ನು ತಪ್ಪಿಸಿಕೊಳ್ಳುವ ರೀತಿಯಲ್ಲೇ ಆ ಆಟದ ಸಾಮಾನನ್ನು ಬಿಟ್ಟುಬಿಡುವುದನ್ನು ತಾನೇ ತಾನಾಗಿ ಕಲಿಯುತ್ತದೆ. ಇಲ್ಲಿಯವರೆಗೆ ನಾವು ಶೈಕ್ಷಣಿಕ ಬೋಧನೆಗೆ ಭಿನ್ನವಾದ ತರಬೇತಿ ಎಂದು ಕರೆಯಬಹುದಾದುದರ ಕುರಿತು ಚಿಂತಿಸುತ್ತಿದ್ದೆವು. ನಾವು ಗಮನಿಸಿರುವ ಬದಲಾವಣೆಗಳೆಲ್ಲ ಬಾಹ್ಯ ಚಟುವಟಿಕೆ-ಯದ್ದಾಗಿದೆಯೇ ಹೊರತು ಮಾನಸಿಕ ಮತ್ತು ಭಾವನಾತ್ಮಕ ಸ್ವಭಾವದ ನಡವಳಿಕೆಯಲ್ಲಲ್ಲ. ಆದರೆ ಈ ವ್ಯತ್ಯಾಸ ತೀಕ್ಷ್ಣವಾದದ್ದಲ್ಲ. ಆ ಮಗು ಬರೀ ಆ ಒಂದು ಆಟದ ಸಾಮಾನಿಗೆ ಮಾತ್ರವಲ್ಲ ಆ ಆಟದ ಸಾಮಾನಿನ ವರ್ಗಕ್ಕೆ ಸೇರಿದ ಉಳಿದ ಆಟದ ಸಾಮಾನಿನ ಜೊತೆಗೂ ಸಹ ಮುಂದೆ, ಕಾಲಾನುಕ್ರಮದಲ್ಲಿ, ಬಲವಾದ ಜುಗುಪ್ಸೆಯನ್ನು, ರೂಢವೈರವನ್ನು ಹೊಂದಬಹುದು. ತನ್ನ ಮೊದಲಿನ ಸುಟ್ಟಗಾಯವನ್ನು ಮರೆತ ನಂತರವೂ ಅದರಲ್ಲಿ ಆ ತಿರಸ್ಕಾರ ಉಳಿದುಕೊಳ್ಳಬಹುದು; ತನ್ನ ಎದ್ದುಕಾಣುವ ಅವೈಚಾರಿಕ ಜುಗುಪ್ಸೆಗೆ ಮುಂದೊಮ್ಮೆ ಆ

ಮಗು ಒಂದು ಕಾರಣವನ್ನು ಸೃಷ್ಟಿಸಿಕೊಳ್ಳಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ಕ್ರಿಯೆಗೆ ಪ್ರಚೋದಿಸುವ ಪರಿಸರವನ್ನು ಬದಲಾಯಿಸುವ ಮೂಲಕ ಬಾಹ್ಯ ಚಟುವಟಿಕೆಗಳ ಅಭ್ಯಾಸಗಳನ್ನು ಬದಲಾಯಿಸುವುದರಿಂದ, ಆ ಚಟುವಟಿಕೆಗೆ ಸಂಬಂಧಪಟ್ಟ ಮಾನಸಿಕ ಪ್ರವೃತ್ತಿಯೂ ಬದಲಾಗುತ್ತದೆ. ಅಂದರೂ ಯಾವಾಗಲೂ ಈ ರೀತಿ ಆಗುವುದಿಲ್ಲ; ಆಕ್ರಮಣಕಾರಿಯಾದ ಹೊಡೆತವನ್ನು ಒಬ್ಬ ವ್ಯಕ್ತಿ ತಪ್ಪಿಸಿಕೊಳ್ಳಲು ತರಬೇತಿ ಪಡೆದಿದ್ದರೆ, ಆತ ಆಕ್ರಮಣವನ್ನು ಯಾವುದೇ ಯೋಚನೆ ಅಥವ ಭಾವನೆಗಳಿಲ್ಲದೇ ಸಹಜವಾಗಿ, ಅಪ್ರಜ್ಞಾಪೂರ್ವಕವಾಗಿ ತಪ್ಪಿಸಿಕೊಳ್ಳುತ್ತಾನೆ. ಹಾಗಾಗಿ ಶಿಕ್ಷಣ ಮತ್ತು ತರಬೇತಿಯ ನಡುವಿನ ವ್ಯತ್ಯಾಸವನ್ನು ನಾವು ಕಂಡುಹಿಡಿಯಬೇಕಾಗುತ್ತದೆ.

ಯಾವ ಸಾಮಾಜಿಕ ಉಪಯೋಗಕ್ಕೆ ಕುದುರೆಯನ್ನು ತೊಡಗಿಸಿರುತ್ತಾರೋ ಅದರಲ್ಲಿ ನಿಜವಾಗಿ ಕುದುರೆಗೆ ಪಾಲಿರುವುದಿಲ್ಲ ಎಂಬ ಸಂಗತಿಯಲ್ಲಿ ಒಂದು ಸುಳಿವನ್ನು ನಾವು ಕಂಡುಕೊಳ್ಳಬೇಕು. ಒಂದು ಉಪಯುಕ್ತವಾದ ಫಲಿತಾಂಶ ಪಡೆಯಲಿಕ್ಕಾಗಿ, ಪರಿಣಾಮಕ್ಕಾಗಿ, ಯಾರೋ ಕುದುರೆಯನ್ನು ಬಳಸುತ್ತಾರೆ, ಆ ಮೂಲಕ ಕುದುರೆಗೆ ತನ್ನ ಕೆಲಸ ಮಾಡಿ ಆಹಾರ ಮೊದಲಾದವುಗಳನ್ನು ಪಡೆಯಲು ಅನುಕೂಲವಾಗುತ್ತದೆ. ಆದರೆ ಆ ಕುದುರೆ ಆ ಕೆಲಸದಲ್ಲಿ ಹೊಸ ಆಸಕ್ತಿಯನ್ನೇನೂ ಪಡೆಯುವುದಿಲ್ಲ. ಅದಕ್ಕೆ ತನ್ನ ಆಹಾರದಲ್ಲಿ ಆಸಕ್ತಿ ಇರುತ್ತದೆಯೇ ಹೊರತು, ತಾನು ಮಾಡುತ್ತಿರುವ ಸೇವೆಯಲ್ಲಲ್ಲ. ಅದು ಆ ಚಟುವಟಿಕೆಯ ಪಾಲುದಾರನಲ್ಲ. ಅದು ಪಾಲುದಾರನಾಗಬೇಕಿದ್ದಲ್ಲಿ, ಸಂಯುಕ್ತ ಚಟುವಟಿಕೆಗಳಲ್ಲಿ ಭಾಗವಹಿಸಬೇಕಾಗುತ್ತದೆ, ಅವುಗಳನ್ನು ಪೂರ್ಣಗೊಳಿಸಲು ಉಳಿದವರು ಹೊಂದಿರುವಷ್ಟೇ ಆಸಕ್ತಿಯನ್ನು ಹೊಂದಿರಬೇಕಾಗುತ್ತದೆ. ಉಳಿದವರ ಚಿಂತನೆಗಳನ್ನು ಮತ್ತು ಭಾವನೆಗಳನ್ನು ಹಂಚಿಕೊಳ್ಳಬೇಕಾಗುತ್ತದೆ.

ಅನೇಕ ಸಂದರ್ಭಗಳಲ್ಲಿ, -ಅತಿಹೆಚ್ಚಿನ ಸಂದರ್ಭಗಳಲ್ಲಿ- ಅಪಕ್ವ ಮಾನವನ ಚಟುವಟಿಕೆಗಳು ಉಪಯುಕ್ತ ಅಭ್ಯಾಸಗಳನ್ನು ರೂಢಿಗೊಳಿಸುವುದಕ್ಕಾಗಿಯೇ ಇರುತ್ತವೆ. ಅವನು ಪ್ರಾಣಿಗಳ ರೀತಿಯಲ್ಲಿ ತರಬೇತಿ ಪಡೆದಿರುತ್ತಾನೆಯೇ ಹೊರತು, ಮನುಷ್ಯರ ರೀತಿಯಲ್ಲಿ ಶಿಕ್ಷಣ ಪಡೆದಿರುವುದಿಲ್ಲ. ಆತನ ಮೂಲ ಪ್ರವೃತ್ತಿ ನೋವು ಅಥವ ನಲಿವಿನಂತಹ ಮೂಲ ಉದ್ದೇಶಗಳಿಗಷ್ಟೇ ಹೊಂದಿಕೊಂಡಿರುತ್ತದೆ. ಆದರೆ ಆತ ಸಂತೋಷವನ್ನು ಪಡೆಯಲು ಅಥವ ಸೋಲಿನ ನೋವಿನಿಂದ ದೂರವಿರಲು ಉಳಿದವರು ಒಪ್ಪುವಂತೆ ನಡೆದುಕೊಳ್ಳಬೇಕಾಗುತ್ತದೆ. ಉಳಿದಂತೆಯಾದರೆ ಸಾಮಾನ್ಯ ಚಟುವಟಿಕೆಗಳಲ್ಲಿ ಆತ ಹಂಚಿಕೊಳ್ಳುತ್ತಾನೆ ಅಥವ ಭಾಗವಹಿಸುತ್ತಾನೆ. ಆದರೆ ಇಲ್ಲಿ ಆತನ ಮೂಲ ಪ್ರವೃತ್ತಿ ಪರಿವರ್ತನೆಗೊಂಡಿದೆ. ಆತ ಉಳಿದವರ ನಡವಳಿಕೆಗೆ ಒಪ್ಪುವಂತೆ ನಡೆದುಕೊಳ್ಳುವುದಷ್ಟೇ ಅಲ್ಲ, ಹೀಗೆ ನಡೆದುಕೊಳ್ಳುವಾಗ ಉಳಿದವರಲ್ಲಿ ಕಂಡುಬರುವ ಚಿಂತನೆ ಹಾಗು ಭಾವನೆಗಳೇ ಆತನಲ್ಲೂ ಉತ್ಪತ್ತಿಯಾಗುತ್ತವೆ. ಉದಾಹರಣೆಗೆ ಹೇಳಬೇಕೆಂದರೆ ಯುದ್ಧ ಸನ್ನದ್ಧವಾದ ಒಂದು ಬುಡಕಟ್ಟು ಜನಾಂಗ. ಯಶಸ್ಸಿಗಾಗಿ ಅದು ಪಡುವ ಶ್ರಮ, ಗೆಲುವಿನೆಡೆಗೆ ಅದು ನೆಟ್ಟ ದೃಷ್ಟಿ, ಇವು ಅದು ನಡೆಸುವ ಹೋರಾಟ ಮತ್ತು ವಿಜಯವನ್ನವಲಂಬಿಸಿದೆ. ಈ ರೀತಿಯ ವಾತಾವರಣದ ಇರುವಿಕೆಯೇ ಹುಡುಗನಲ್ಲಿಯ ಯುದ್ಧಾಸಕ್ತಿಯನ್ನು ಪ್ರದರ್ಶಿಸಲು ಉತ್ತೇಜನ ನೀಡುತ್ತದೆ. ಮೊದಲು ಅದು ಆತನ ಆಟದಲ್ಲಿ, ಆತ ಬಲಿಷ್ಠನಾದ ನಂತರ ಅದು ಆತನ ಕ್ರಿಯೆಯಲ್ಲೂ ಕಂಡುಬರುತ್ತದೆ. ಆತ ಹೋರಾಟಕ್ಕಿಳಿದಾಗ ಮೆಚ್ಚುಗೆಯನ್ನು ಪಡೆದು ಮುನ್ನಡೆಯುತ್ತಾನೆ; ಅದೇ ಆತ ಹಿಂದುಳಿದರೆ, ಆತನನ್ನು ಇತರರು ಇಷ್ಟಪಡರು. ಅವನು ಅಪಹಾಸ್ಯಕ್ಕೀಡಾಗುತ್ತಾನೆ, ಇಷ್ಟವಾಗಬಲ್ಲ ಮನ್ನಣೆಯಿಂದ ಹೊರಗುಳಿಯುತ್ತಾನೆ. ಆತನ ಮೂಲ ಹೋರಾಟದ ಪ್ರವೃತ್ತಿ ಮತ್ತು ಭಾವೋದ್ವೇಗಗಳು ಬೇರೆಯವರ ಕಾರಣದಿಂದಾಗಿ ಗಟ್ಟಿಗೊಂಡಿದ್ದು ಮತ್ತು ಯುದ್ಧಕ್ಕೆ ಸಂಬಂಧಿಸಿದಂತಹ ಆತನ ಕಲ್ಪನೆಗಳು ಕ್ರಿಯೆಯಾಗಿ ಬದಲಾಗುವುದು ಆಶ್ಚರ್ಯಕರ ವಿಚಾರಗಳಲ್ಲ. ಈ ರೀತಿಯಾಗಿ ಮಾತ್ರ ಆತ ತನ್ನ ಗುಂಪಿನಲ್ಲಿ ಸಂಪೂರ್ಣ ಮನ್ನಣೆ ಗಳಿಸಿದ ಸದಸ್ಯನಾಗಲು ಸಾಧ್ಯ. ಹೀಗೆ ಆತನ ಮಾನಸಿಕ

ಅಭ್ಯಾಸ, ಸ್ಥಿತಿಗಳು ಆತನ ಗುಂಪಿನಲ್ಲಿರುವ ಇತರರ ಮನೋಧರ್ಮದಲ್ಲಿ ಬೆಸೆದುಕೊಳ್ಳುತ್ತವೆ.

ಈ ಉದಾಹರಣೆಯಲ್ಲಿರುವ ಮೂಲ ತತ್ವವನ್ನು ನಾವು ಸೂತ್ರ ರೂಪದಲ್ಲಿ ನಿರೂಪಿಸುವುದಾದರೆ, ಸಾಮಾಜಿಕ ಮಾಧ್ಯಮವು ನಿರ್ದಿಷ್ಟವಾದ ಬಯಕೆಗಳು ಹಾಗೂ ವಿಚಾರಗಳನ್ನು ನೇರವಾಗಿ ಬಿತ್ತುವುದಿಲ್ಲ, ಹಾಗೆಯೇ "ಪ್ರವೃತ್ತಿಸಹಜವಾಗಿ" ಕಣ್ಣು ಮಿಟಕಿಸುವ ಅಥವಾ ಹೊಡೆತವನ್ನು ತಪ್ಪಿಸಿಕೊಳ್ಳುವಂತಹ ಕೆಲವು ಬರೀ ದೈಹಿಕ ಚಟುವಟಿಕೆಯ ಅಭ್ಯಾಸವನ್ನು ಹುಟ್ಟುಹಾಕುವುದಿಲ್ಲ. ಕಣ್ಣಿಗೆ ಕಾಣುವಂತಹ ಮತ್ತು ಸ್ಪಷ್ಟವಾದ ರೀತಿಯ ನಡವಳಿಕೆಯನ್ನು ಉತ್ತೇಜಿಸುವಂತಹ ಪರಿಸ್ಥಿತಿಯನ್ನು ನಿರ್ಮಿಸುವುದು ಮೊದಲ ಹೆಜ್ಜೆ. ಸಂಬಂಧಪಟ್ಟ ಚಟುವಟಿಕೆಗಳಲ್ಲಿ ವ್ಯಕ್ತಿಯನ್ನು ಭಾಗಿದಾರ ಅಥವ ಪಾಲುದಾರನನ್ನಾಗಿ ಮಾಡಿದಲ್ಲಿ, ಅದರ ಗೆಲುವು ತನ್ನ ಗೆಲುವು, ಅದರ ಸೋಲು ತನ್ನ ಸೋಲು ಎಂದು ಆತ ತಿಳಿದಾಗ ಅದು ಅಂತಿಮ ಹೆಜ್ಜೆಯಾಗುತ್ತದೆ. ತನ್ನ ಗುಂಪಿನ ಮಾನಸಿಕ ನಿಲುವಿಗೆ ಆತ ಒಳಗಾದ ಕೂಡಲೇ, ಆ ಗುಂಪಿನ ವಿಶೇಷ ಉದ್ದೇಶಗಳಿಗೆ ಎಚ್ಚರವಾಗಿದ್ದು ಯಶಸ್ಸನ್ನು ಪಡೆಯಲು ಅದು ಬಳಸಿಕೊಂಡ ರೀತಿಯನ್ನು ಆತ ಎಚ್ಚರಿಕೆಯಿಂದ ಗುರುತಿಸತೊಡಗುತ್ತಾನೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಗುಂಪಿನಲ್ಲಿರುವ ಇತರರ ರೀತಿಯಲ್ಲಿಯೇ ಆತನ ನಂಬುಗೆಗಳು, ಕಲ್ಪನೆಗಳು, ರೂಪುಗೊಳ್ಳುತ್ತವೆ. ಆತನೂ ಸುಮಾರು ಅಷ್ಟೇ ಮಟ್ಟದ ಜ್ಞಾನವನ್ನು ಪಡೆದುಕೊಳ್ಳುತ್ತಾನೆ. ಏಕೆಂದರೆ ಆ ಜ್ಞಾನವು ಅವನ ದೈನಂದಿನ ರೂಢಿಗತ ಅನುಸರಣೆಯ ಒಂದು ಭಾಗವಾಗಿರುತ್ತದೆ.

ಜ್ಞಾನವನ್ನು ಪಡೆಯುವಲ್ಲಿ ಭಾಷೆಗೆ ಇರುವ ಮಹತ್ವವೇ, ಜ್ಞಾನವನ್ನು ಒಬ್ಬರಿಂದ ಮತ್ತೊಬ್ಬರಿಗೆ ನೇರವಾಗಿ ವರ್ಗಾಯಿಸಬಹುದೆಂಬ ಸಾಮಾನ್ಯ ಅಭಿಪ್ರಾಯಕ್ಕೆ ಮುಖ್ಯ ಕಾರಣ ಎನ್ನುವುದರಲ್ಲಿ ಅನುಮಾನವಿಲ್ಲ. ಇದನ್ನು ನೋಡಿದಾಗ, ನಾವು ಒಂದು ವಿಚಾರವನ್ನು ಇನ್ನೊಬ್ಬರ ಮನಮುಟ್ಟುವಂತೆ ಮಾಡುವುದೆಂದರೆ ಆತನ ಕಿವಿಗೆ ಕೆಲವು ಶಬ್ದಗಳನ್ನು ತಲುಪಿಸುವುದು ಎನ್ನಿಸುವಂತಿದೆ. ಹೀಗೆ ಜ್ಞಾನವನ್ನು ಕೊಡುವುದು ಕೇವಲ ಒಂದು ಶುದ್ಧ ದೈಹಿಕ ಪ್ರಕ್ರಿಯೆಯಾಗಿಬಿಡುತ್ತದೆ. ಭಾಷೆಯಿಂದಾಗುವ ಕಲಿಕೆಯು, ವಿಶ್ಲೇಷಿಸಿದಾಗ, ನಾವು ಈಗಷ್ಟೇ ನಿರೂಪಿಸಿದ ಸಿದ್ಧಾಂತವನ್ನು ಖಚಿತಪಡಿಸಬಹುದು. ಉದಾಹರಣೆಗೆ ಮಗುವಿಗೆ ಟೊಪ್ಪಿಯ ಕಲ್ಪನೆ ಹೇಗೆ ಬರುತ್ತದೆ? ಅದನ್ನು ಇತರರು ಉಪಯೋಗಿಸುವುದನ್ನು ನೋಡುವುದರ ಮೂಲಕ ಅಂದರೆ, ಹೊರಗೆ ಹೋದಾಗ ಬೇರೆಯವರು ತಲೆಯ ಮೇಲೆ ಟೋಪಿ ಹಾಕಿಕೊಳ್ಳುವುದನ್ನು ನೋಡುವ ಮೂಲಕ, ಇತರರಂತೆ ತಲೆಯ ಮೇಲೆ ಟೊಪ್ಪಿಯನ್ನು ಹಾಕಿಕೊಳ್ಳುವುದರ ಮೂಲಕ, ಇನ್ನೊಬ್ಬರಿಗೆ ಧರಿಸಲು ಕೊಡುವುದರ ಮೂಲಕ, ಮುಂತಾದ ರೀತಿಯಲ್ಲಿ ಎಂದು ಹೆಚ್ಚಿನ ಹಿಂಜ-ರಿಕೆಯಿಲ್ಲದೆ ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಪ್ರತ್ಯಕ್ಷವಾಗಿ ಅನುಭವಕ್ಕೆ ಬರಲಾಗದಂತಹ ಗ್ರೀಕ್ ಹೆಲ್ಮೆಟ್ ತರಹದ ಸಂಗತಿಯನ್ನು ಕೇವಲ ಕೇಳುವ ಅಥವ ಓದುವ ಮೂಲಕ ಗ್ರಹಿಸುವಾಗ, ಈ ರೀತಿಯ ಸಹಭಾಗಿತ್ವದ ಚಟುವಟಿಕೆಗಳ ಸಿದ್ಧಾಂತವು ಹೇಗೆ ಅನ್ವಯವಾಗುತ್ತದೆ ಎಂಬ ಪ್ರಶ್ನೆ ಮೂಡಬಹುದು. ಅಮೆರಿಕವನ್ನು ಕಂಡುಹಿಡಿದ ಬಗ್ಗೆ ಇರುವ ಪುಸ್ತಕದಿಂದ ಕಲಿಯುವ ವಿಚಾರದಲ್ಲಿ ಯಾವ ಸಹಭಾಗಿತ್ವದ ಚಟುವಟಿಕೆ ಇರಬಹುದು?

ಹೆಚ್ಚಿನ ವಿಚಾರಗಳನ್ನು ಕಲಿಯಲು ಭಾಷೆಯೇ ಮುಖ್ಯ ಸಾಧನವಾಗುವುದರಿಂದ ಭಾಷೆ ಹೇಗೆ ಕೆಲಸಮಾಡುತ್ತದೆ ಎಂಬುದನ್ನು ನೋಡೋಣ. ಒಂದು ಮಗು ಯಾವುದೇ ಅರ್ಥಗಳಿಲ್ಲದ ಧ್ವನಿಗಳು, ಶಬ್ದಗಳು, ಸ್ವರಗಳನ್ನು ಹೊರಡಿಸುತ್ತದೆ, ಅದರಲ್ಲಿ ಯಾವ ವಿಚಾರಗಳೂ ಇರುವುದಿಲ್ಲ. ಶಬ್ದಗಳು ಪ್ರತಿಕ್ರಿಯೆಗಳನ್ನು ನಿರ್ದೇಶಿಸಲು ಒಂದು ರೀತಿಯ ಉತ್ತೇಜಕಗಳು. ಕೆಲವಕ್ಕೆ ಸಂತೈಸುವ ಶಕ್ತಿಯಿದೆ, ಕೆಲವು ದುಗುಡವನ್ನು ಉಂಟುಮಾಡಬಹುದು. ಬಹಳಷ್ಟು ಜನರು ಭಾಗವಹಿಸಿದಂತಹ ಚಟುವಟಿಕೆಯೊಡನೆ ಆ

ಶಬ್ದವನ್ನು ಬಳಸಿಲ್ಲವೆಂದಾದರೆ ಟೊ-ಪ್ಪಿ-ಗೆ ಎನ್ನುವ ಶಬ್ದವೂ ಕಚಡಣತ ಶಬ್ದದಷ್ಟೇ ಒಂದು ಅರ್ಥಹೀನ ಅಸ್ಪಷ್ಟ ಉದ್ಗಾರವಾದೀತು. ತಾಯಿಯು ಮಗುವನ್ನು ಹೊರಗೆ ಕರೆ-ದುಕೊಂಡು ಹೋಗುವಾಗ, ಅವಳು "ಟೊಪ್ಪಿಗೆ" ಎಂದು ಹೇಳಿ ತಲೆಯ ಮೇಲೆ ಏನನ್ನೋ ಹಾಕುತ್ತಾಳೆ. ಹೊರಗೆ ಹೋಗುವುದು ಮಗುವಿಗೆ ಆಸಕ್ತಿದಾಯಕ ಎನಿಸುತ್ತದೆ; ತಾಯಿ ಮಗು ಇಬ್ಬರೂ ದೈಹಿಕವಾಗಿ ಹೊರಗೆ ಹೋಗುವುದಷ್ಟೇ ಅಲ್ಲ, ಇಬ್ಬರೂ ಹೊರಗೆ ಹೋಗುವುದರ ಭಾಗವಾಗಿರುತ್ತಾರೆ ಮತ್ತು ಇಬ್ಬರೂ ಅದನ್ನು ಒಟ್ಟಿಗೆ ಆನಂದಿಸುತ್ತಾರೆ. ಚಟುವಟಿಕೆಯಲ್ಲಿರುವ ಇತರ ಅಂಶಗಳನ್ನು ಸೇರಿಸಿದಾಗ, ಕೆಲ ಸಮಯದಲ್ಲೇ "ಟೊಪ್ಪಿಗೆ" ಶಬ್ದವು ಮಗುವಿನಲ್ಲಿ ಅದರ ಪೋಷಕರು ಬಳಸುವ ಅರ್ಥವನ್ನೇ ಪಡೆಯುತ್ತದೆ; ಅದು ಭಾಗವಹಿಸುವ ಒಂದು ಕ್ರಿಯೆಯನ್ನು ಸೂಚಿಸುತ್ತದೆ. ಭಾಷೆಯು ಇಬ್ಬರಿಗೂ ಗ್ರಹಿಸಲು ಸಾಧ್ಯವಾದಂತಹ ಶಬ್ದಗಳನ್ನು ಒಳಗೊಂಡಿರುತ್ತದೆ ಎನ್ನುವ ಸರಳ ವಿಚಾರವೇ, ಇಬ್ಬರೂ ಹಂಚಿಕೊಂಡ ಅನುಭವವನ್ನು ಅದರ ಅರ್ಥ ಅವಲಂಬಿಸಿರುತ್ತದೆ ಎನ್ನುವುದನ್ನು ತೋರಿಸುತ್ತದೆ.

ಒಟ್ಟಿನಲ್ಲಿ, ಟೊ-ಪ್ಪಿ-ಗೆ ಶಬ್ದವು, ಒಂದು ನಿರ್ದಿಷ್ಟ ರೀತಿಯಲ್ಲಿ ಉಪಯೋಗಿಸಲ್ಪಡುವುದರಿಂದಲೇ, "ಟೊಪ್ಪಿಗೆ" ಎಂಬ ವಸ್ತು ಪಡೆದಂತೆಯೇ ಅರ್ಥವನ್ನು ಪಡೆಯುತ್ತದೆ. ಇಬ್ಬರೂ ಟೊಪ್ಪಿಗೆಯನ್ನು ಸಮಾನವಾದ ಅನುಭವದಿಂದ ಉಪಯೋಗಿಸಿರುವುದರಿಂದ ದೊಡ್ಡವರಿಂದ ಪಡೆದಂತೆಯೇ ಮಗುವಿನಿಂದಲೂ ಅವು (ಶಬ್ದ ಮತ್ತು ವಸ್ತು) ಅದೇ ಅರ್ಥವನ್ನು ಪಡೆಯುತ್ತವೆ. ಅದರ ಉಪಯೋಗದಲ್ಲಿ ಒಂದೇ ರೀತಿಯ ಬಳಕೆಯ ಭರವಸೆ ಕಂಡುಬರಲು ಕಾರಣ, ಮಗು ಮತ್ತು ದೊಡ್ಡವರ ನಡುವೆ ಸಕ್ರಿಯವಾದ ಸಂಪರ್ಕವನ್ನು ಸ್ಥಾಪಿಸಲು, ಆ ವಸ್ತು ಮತ್ತು ಅದರ ಶಬ್ದ ಜೊತೆಯಾಗಿ ಬಳಕೆಯಾಗುವುದು. ಸಮಾನ ರೂಪದ ಚಿಂತನೆ ಅಥವ ಅರ್ಥ ಹೊರಹೊಮ್ಮಲು ಕಾರಣ ಎಂದರೆ ಇಬ್ಬರೂ ವ್ಯಕ್ತಿಗಳೂ ಒಂದು ಚಟುವಟಿಕೆಯಲ್ಲಿ ಪಾಲುದಾರರಾಗಿರುತ್ತಾರೆ; ಒಬ್ಬರ ಕ್ರಿಯೆ ಇನ್ನೊಬ್ಬರ ಕ್ರಿಯೆಯನ್ನು ಅವಲಂಬಿಸಿರುತ್ತದೆ ಮತ್ತು ಇನ್ನೊಬ್ಬರ ಕ್ರಿಯೆಯನ್ನು ಪ್ರಭಾವಿಸುತ್ತದೆ. ಇಬ್ಬರು ಆದಿಮಮಾನವರು (savages) ಜಂಟಿಯಾಗಿ ಬೇಟೆಯಾಡಲು ನಿರ್ಧರಿಸಿದ್ದಾರೆ ಎಂದು ಕೊಳ್ಳೋಣ. ಹೇಳಿದವನಿಗೆ "ಬಲಗಡೆಗೆ ತಿರುಗು" ಎಂದು ಅರ್ಥ ಕೊಡುವ ನಿರ್ದಿಷ್ಟವಾದ ಸಂದೇಶ, ಕೇಳಿದವನಿಗೆ "ಎಡಗಡೆಗೆ ತಿರುಗು" ಎಂದು ಅರ್ಥವಾದಾಗ, ಅವರಿಗೆ ತಮ್ಮ ಬೇಟೆ ಯಶಸ್ವಿಯಾಗಲು ಸಾಧ್ಯವಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ಒಬ್ಬರನ್ನೊಬ್ಬರು ಅರ್ಥ ಮಾಡಿಕೊಳ್ಳುವುದು ಎಂದರೆ, ಸಮಾನವಾದ ಒಂದೇ ವೃತ್ತಿಯಲ್ಲಿ ಇಬ್ಬರು ತೊಡಗಿಸಿಕೊಂಡಾಗ, ಶಬ್ದಗಳು ಹಾಗೂ ವಸ್ತುಗಳು ಇಬ್ಬರಿಗೂ ಒಂದೇ ಮೌಲ್ಯವನ್ನು ಸೂಚಿಸಬೇಕು.

ಒಂದು ಸಂಘಟಿತ ನಡೆಯಲ್ಲಿ ಬಳಕೆಯಾಗುವ ಸಂಗತಿಗಳ, ವಸ್ತುಗಳ ಸಂಬಂಧದಲ್ಲಿ ಶಬ್ದಗಳು ಅರ್ಥವನ್ನು ಪಡೆಯುತ್ತವೆ. ಆ ನಂತರ, ಆ ಶಬ್ದಗಳನ್ನು ಇತರ ಶಬ್ದಗಳೊಂದಿಗೆ ಹೊಸ ಅರ್ಥಗಳನ್ನು ನೀಡುವಂತೆ ಬಳಸಬಹುದು. ಹೇಗೆಂದರೆ ಅವು ಸೂಚಿಸುವ ವಸ್ತುಗಳ, ಸಂಗತಿಗಳ ಜೋಡಣೆಯಿಂದ ಹೊಸ ವಸ್ತುಗಳು, ಸಂಗತಿಗಳು ಮೂಡುವ ರೀತಿಯಲ್ಲಿ. ಹೀಗೆ ಮಗು ಶಬ್ದಗಳನ್ನು ಕಲಿಯುತ್ತದೆ. ಉದಾಹರಣೆಗೆ, ಗ್ರೀಕ್ ಶಿರಸ್ತ್ರಾಣವನ್ನು ತೆಗೆದುಕೊಳ್ಳೋಣ. ಇದರ ಬಗೆಗೆ ಅರಿಯಲು ಒಂದು ಮಗು ಬಳಸುವ ಪದಗಳು ಹಿಂದೆ ಒಂದು ಕ್ರಿಯೆಯಲ್ಲಿ ಸಮಾನ ಆಸಕ್ತಿ ಮತ್ತು ಉದ್ದೇಶದಿಂದ ಉಪಯೋಗಿಸಿದ ಪದಗಳು. ಈಗ ಅದೇ ಪದಗಳು ಶಿರಸ್ತ್ರಾಣವನ್ನು ಯಾವ ಚಟುವಟಿ-ಕೆಗಳಲ್ಲಿ ಬಳಸುತ್ತಾರೋ ಅದನ್ನು ಕಲ್ಪಿಸಿಕೊಳ್ಳುವಂತೆ ಅದನ್ನು ಕೇಳಿದವರನ್ನು ಮತ್ತು ಓದುವವರನ್ನು ಪ್ರಚೋದಿಸುತ್ತವೆ ಹಾಗೂ ಹೊಸ ಅರ್ಥವನ್ನು ಅವು ಈಗ ಪಡೆಯುತ್ತವೆ. ಈ ಸನ್ನಿವೇಶದಲ್ಲಿ ಯಾರು "ಗ್ರೀಕ್ ಶಿರಸ್ತ್ರಾಣ" ಶಬ್ದವನ್ನು ಅರ್ಥಮಾಡಿಕೊಳ್ಳುತ್ತಾನೋ ಅವನು ಮಾನಸಿಕವಾಗಿ ಶಿರಸ್ತ್ರಾಣವನ್ನು ಬಳಸುವವರ ಸಂಗಾತಿಯಾಗುತ್ತಾನೆ. ಸಹಭಾಗಿತ್ವದ ಚಟುವಟಿಕೆಯಲ್ಲಿ

ಆತ ತನ್ನ ಕಲ್ಪನೆಯ ಮೂಲಕ ತನ್ನನ್ನು ತೊಡಗಿಸಿಕೊಳ್ಳುತ್ತಾನೆ. ಶಬ್ದಗಳ ಪೂರ್ಣ ಅರ್ಥ ಪಡೆಯುವುದು ಅಷ್ಟು ಸುಲಭದ ಕೆಲಸವಲ್ಲ. ಹೆಚ್ಚಿನವರು ಬಹುಶಃ "ಶಿರಸ್ತ್ರಾಣ" ಎಂದೊಡನೆ ಬಹಳ ವರ್ಷಗಳ ಹಿಂದೆ ಗ್ರೀಕರೆನಿಸಿಕೊಂಡವರು ಬಳಸುತ್ತಿದ್ದ ವಿಲಕ್ಷಣ ಶಿರಕವಚ, ತೊಡುಗೆ ಎಂದು ಅಂದುಕೊಳ್ಳುತ್ತಾರೆ ಅಷ್ಟೇ. ಅಂದರೆ ನಾವು ತೆಗೆದುಕೊಳ್ಳಬಹುದಾದ ತೀರ್ಮಾನ ಇದು: ವಿಚಾರಗಳನ್ನು ತಿಳಿಸಲು ಮತ್ತು ಗ್ರಹಿಸಲು ಭಾಷೆಯನ್ನು ಬಳಸುವುದರ ಹಿಂದಿರುವ ತತ್ವವು “ವಸ್ತುಗಳು ಅರ್ಥವನ್ನು ಪಡೆಯುವುದು ಅವಗಳಿಗೆ ಸಂಬಂಧಿಸಿದ ಸಾಮುದಾಯಿಕ ಭಾಗವಹಿಸುವಿಕೆ ಹಾಗೂ ಕ್ರಿಯೆಯಲ್ಲಿ” ಎಂಬ ತತ್ವದ ವಿಸ್ತರಣೆ ಹಾಗೂ ಪರಿಷ್ಕರಣೆಯಾಗಿದೆ; ಯಾವ ರೀತಿಯಲ್ಲೂ ಭಾಷೆಯ ಹಿಂದಿನ ತತ್ವ ಆ ತತ್ವವನ್ನು ಉಲ್ಲಂಘಿಸುವುದಿಲ್ಲ ಎಂಬ ಅಭಿಪ್ರಾಯಕ್ಕೆ ನಾವು ಬರಬಹುದು. ಶಬ್ದಗಳು ನೈಜ ಸನ್ನಿವೇಶಗಳಲ್ಲಿ ಬಹಿರಂಗವಾಗಿ ಅಥವಾ ಕಾಲ್ಪನಿಕವಾಗಿ ಬಳಕೆ ಆಗದಿದ್ದಾಗ, ಅವು ಕೇವಲ ಭೌತಿಕ ಉದ್ದೀಪಕಗಳಾಗಿರುತ್ತವೆಯೇ (ದೈಹಿಕ ಸನ್ನೆಗಳು) ಹೊರತೂ ಅದಕ್ಕೊಂದು ಅರ್ಥ ಅಥವ ಬೌದ್ಧಿಕ ಮೌಲ್ಯವಾಗಲೀ ಇರುವುದಿಲ್ಲ. ಅವುಗಳು ಚಟುವಟಿಕೆಗಳನ್ನು ನಿಗದಿತ ದಾರಿಯಲ್ಲಿ ಮುಂದುವರಿಯುತ್ತಿರುವಂತೆ ಮಾಡುತ್ತವೆ. ಆದರೆ ಅದರೊಡನೆ ಪ್ರಜ್ಞಾಪೂರ್ವಕ ಉದ್ದೇಶ ಅಥವ ಅರ್ಥ ಜೊತೆಗೂಡಿರುವುದಿಲ್ಲ. ಉದಾಹರಣೆಗೆ, ಕೂಡುವ ಚಿಹ್ನೆಯು (+) ಒಂದು ಸಂಖ್ಯೆಯ ಕೆಳಗೆ ಇನ್ನೊಂದನ್ನು ಬರೆದು ಆ ಸಂಖ್ಯೆಗಳನ್ನು ಕೂಡಿಸಲು ಒಂದು ಸೂಚನೆಯಾಗಿರಬಹುದು, ಆದರೆ ಆ ಚಟುವಟಿಕೆಯನ್ನು ನಡೆಸುವ ವ್ಯಕ್ತಿ ತಾನೇನು ಮಾಡುತ್ತಿದ್ದೇನೆ ಎಂಬುದನ್ನು ಅರ್ಥ ಮಾಡಿಕೊಳ್ಳದಿದ್ದರೆ ಅದನ್ನು ಸ್ವಯಂ ಚಾಲಿತ ವಸ್ತುವಿನಂತೆ ನಡೆಸಿಬಿಡುತ್ತಾನೆ.

### 3. ಬೋಧಪ್ರದ ಸಾಮಾಜಿಕ ಮಾಧ್ಯಮ (The Social Medium as Educative)

ಇಲ್ಲಿಯವರೆಗಿನ ನಮ್ಮ ಒಟ್ಟು ಚರ್ಚೆ ಇದು: ನಿರ್ದಿಷ್ಟ ಉದ್ದೇಶಗಳನ್ನು ಹೊಂದಿದ್ದು ನಿರ್ದಿಷ್ಟ ಪರಿಣಾಮಗಳನ್ನು ಒಳಗೊಂಡಿರುವ ಹಾಗೂ ನಿರ್ದಿಷ್ಟವಾದ ಕೆಲವು ಪ್ರವೃತ್ತಿಗಳನ್ನು ಹುಟ್ಟಿಸುವಂತಹ ಮತ್ತು ಗಟ್ಟಿಗೊಳಿಸುವಂತಹ ಚಟುವಟಿಕೆಗಳಲ್ಲಿ ತೊಡಗಿಸುವ ಮೂಲಕ, ಸಾಮಾಜಿಕ ಪರಿಸರವು ವ್ಯಕ್ತಿಯಲ್ಲಿ ಮಾನಸಿಕ ಮತ್ತು ಭಾವನಾತ್ಮಕ ಸ್ವಭಾವವನ್ನು ಮೂಡಿಸುತ್ತದೆ ಎಂಬುದು. ಸಂಗೀತಗಾರರ ಮನೆಯಲ್ಲಿ ಬೆಳೆಯುತ್ತಿರುವ ಮಗುವಿನ ಸಂಗೀತದಲ್ಲಿರುವ ಯಾವುದೇ ಸಾಮರ್ಥ್ಯವು ಸಹಜವಾಗಿ ಉದ್ದೀಪನಗೊಳ್ಳುತ್ತದೆ. ಅದು ಸಾಪೇಕ್ಷವಾಗಿ ಬೇರೊಂದು ವಾತಾವರಣದಲ್ಲಿ ಉತ್ತೇಜಿತಗೊಳ್ಳಬಹುದಾಗಿದ್ದ ಆ ಮಗುವಿನ ಬೇರೆ ಆಸಕ್ತಿಗಳಿಗಿಂತಲೂ ಹೆಚ್ಚಾಗಿ ಉತ್ತೇಜಿತಗೊಳ್ಳುತ್ತದೆ. ಆತ ಸಂಗೀತದಲ್ಲಿ ಆಸಕ್ತಿ ಹೊಂದಿ ಅದರಲ್ಲಿ ಒಂದಷ್ಟು ಸಾಮರ್ಥ್ಯವನ್ನು ಪಡೆದಿರುತ್ತಾನೆ ಎಂದೆಣಿಸೋಣ. ನಂತರ ಅದನ್ನು ಬಿಟ್ಟು ಬಿಟ್ಟಾಗ, ಅವನು ಯಾವ ಗುಂಪಿಗೆ ಸೇರಿರುತ್ತಾನೋ ಅವರ ಜೀವನದಲ್ಲಿ ಜೊತೆಯಾಗಲು ಅವನಿಗೆ ಅಸಾಧ್ಯವಾಗುತ್ತದೆ. ಆದರೆ ಅವರೊಂದಿಗೆ ಒಡನಾಡುವುದು ಆ ವ್ಯಕ್ತಿಗೆ ಅನಿವಾರ್ಯವಾಗುತ್ತದೆ. ಅದಕ್ಕನುಗುಣವಾಗಿ ಸಾಮಾಜಿಕ ವಾತಾವರಣವು ಅಪ್ರಜ್ಞಾಪೂರ್ವಕವಾಗಿ ಮತ್ತು ನಿರ್ದಿಷ್ಟ ಗುರಿಯ ಹೊರತಾಗಿ, ಶೈಕ್ಷಣಿಕ ಅಥವ ರಚನಾತ್ಮಕ (formative) ಪ್ರಭಾವ ಬೀರುತ್ತದೆ.

ಅಸಂಸ್ಕೃತ ಮತ್ತು ನಾಗರಿಕಪೂರ್ವ ಸಮುದಾಯಗಳಲ್ಲಿ ಅಂತಹ ನೇರ ಭಾಗವಹಿಸುವಿಕೆ (ನಾವೀಗ ಹೇಳಿದಂತಹ ಅಪರೋಕ್ಷ ಅಥವ ಪ್ರಾಸಂಗಿಕ ಶಿಕ್ಷಣವನ್ನು ಒಳಗೊಂಡಿದ್ದು) ಎಳೆಯರು ಆ ಗುಂಪಿನ ಆಚರಣೆ ಮತ್ತು ನಂಬಿಕೆಗಳನ್ನು ಪಡೆದುಕೊಳ್ಳುವಂತೆ ಮಾಡುವ ಏಕೈಕ ಪ್ರಭಾವವಾಗಿರುತ್ತದೆ. ಇಂದಿನ ಸಮಾಜದಲ್ಲಿ ಕೂಡ, ವ್ಯವಸ್ಥಿತವಾಗಿ ಶಾಲೆಗೆ ಹೋದ ಯುವ ಜನತೆಗೂ ಕೂಡ ಅಂತಹ ಭಾಗವಹಿಸುವಿಕೆ ಸಮಾಜೀಕರಣದ ಮೂಲಭೂತ ಪೋಷಣೆಯಾಗುತ್ತದೆ. ಗುಂಪಿನ ವೃತ್ತಿಗಳು ಮತ್ತು ಆಸಕ್ತಿಯನ್ನು ಅವಲಂಬಿಸಿ ಕೆಲವು ಸಂಗತಿಗಳು ಹೆಚ್ಚು ಮನ್ನಣೆಯ, ಗೌರವಯುತ ವಿಚಾರಗಳಾಗುತ್ತವೆ; ಇನ್ನು ಕೆಲವು ತಿರಸ್ಕಾರಕ್ಕೆ ಒಳಪಟ್ಟವುಗಳಾಗುತ್ತವೆ. ಸಹವಾಸವು

ಪ್ರಚೋದನೆಯನ್ನಾಗಲೀ ಅಥವಾ ಪ್ರೀತಿಸುವಂತಾಗಲೀ, ಇಷ್ಟಪಡದಿರುವಂತಾಗಲೀ ಮಾಡಲಾರದು. ಆದರೆ ಅವರು ತಮ್ಮಿಂದ ತಾವಾಗೇ ಮೋಹಗೊಳ್ಳುವ ಸಂಗತಿಗಳನ್ನು ಅದು ಒದಗಿಸಿಕೊಡುವುದು. ನಮ್ಮ ಗುಂಪು ಅಥವ ವರ್ಗದ ನಡಾವಳಿ ಗಮನಾರ್ಹ ಸಂಗತಿಗಳು ಯಾವುವು ಎನ್ನುವುದನ್ನು ನಿರ್ಧರಿಸುತ್ತದೆ; ಗಮನಿಸುವಿಕೆ ಮತ್ತು ಸ್ಮರಣೆಯ ದಿಕ್ಕು ಮತ್ತು ಸೀಮೆಗಳನ್ನು ನಿರ್ಧರಿಸುತ್ತದೆ. ಯಾವುದು ಹೊರಗಿನದಾಗಿರುತ್ತದೋ (ಗುಂಪಿನ ಹೊರಗಿರುವ ಚಟುವಟಿಕೆಗಳು) ಅದನ್ನು ನೈತಿಕವಾಗಿ ನಿಷೇಧಿಸುವಂತಾಗುತ್ತದೆ ಮತ್ತು ಬೌದ್ಧಿಕವಾಗಿ ಅನುಮಾನ ಪಡುವಂತಾಗುತ್ತದೆ. ಉದಾಹರಣೆಗೆ, ನಮಗೆ ಚೆನ್ನಾಗಿ ಗೊತ್ತಿರುವ ವಿಚಾರಗಳು ಈ ಮೊದಲಿನ ವರ್ಷಗಳಲ್ಲಿ ಗುರುತಿಸದೇ ಹೋಗಿರಬಹುದು ಎಂಬುದು ನಮಗೆ ನಂಬಲಸಾಧ್ಯವೆನಿಸುತ್ತವೆ. ನಾವಿದನ್ನು ನಮ್ಮ ಪೂರ್ವಜರ ಆಜನ್ಮ ಮೂರ್ಖತನಕ್ಕೆ ಆರೋಪಿಸಿ, ನಮ್ಮದು ಸಹಜವಾಗಿ ಉನ್ನತವಾದ ಜಾಣ್ಮೆ ಎಂದು ಪ್ರತಿಪಾದಿಸುವತ್ತ ವಾಲಿಬಿಡುತ್ತೇವೆ. ಆದರೆ ಅದರ ಸರಿಯಾದ ವಿಶ್ಲೇಷಣೆ ಎಂದರೆ, ಅವರ ಜೀವನ ವಿಧಾನ ಆ ವಿಚಾರಗಳಿಗೆ ಗಮನ ನೀಡಲು ಅವಕಾಶ ನೀಡಿರಲಿಲ್ಲ, ಆದರೆ ಅವರು ಬೇರೆ ವಿಚಾರಗಳತ್ತ ತಮ್ಮ ಮನಸ್ಸನ್ನು ಕೇಂದ್ರೀಕರಿಸಿದ್ದರು. ಹೇಗೆ ನಮ್ಮ ಇಂದ್ರಿಯಗಳನ್ನು ಪ್ರಚೋದಿಸಲು ವಿವೇಚನಾಯುಕ್ತ ವಿಷಯಗಳ ಆವಶ್ಯಕತೆ ಇದೆಯೋ, ಹಾಗೆಯೇ, ನಮ್ಮ ಗಮನಿಸುವಿಕೆ, ನೆನಪಿಸಿಕೊಳ್ಳುವುದು ಮತ್ತು ಕಲ್ಪಿಸಿಕೊಳ್ಳುವುದು ಸ್ವಯಂ ಪ್ರೇರಿತವಾಗಿ ನಡೆಯುವ ಕೆಲಸಗಳಲ್ಲ, ಅವು ಪ್ರಚಲಿತ ಸಾಮಾಜಿಕ ಅನುಭವದ ಅಪೇಕ್ಷೆಗೆ ಅನುಗುಣವಾಗಿ ನಡೆಯುತ್ತವೆ. ವಿದ್ಯಾಭ್ಯಾಸದ ಹೊರತಾಗಿ, ಇಂತಹ ವಿಷಯಗಳಿಂದ ಮನೋಧರ್ಮದ ರಚನೆ ಅಥವಾ ಮುಖ್ಯ ಗುಣಲಕ್ಷಣಗಳು ರೂಪಿಸಲ್ಪಡುತ್ತವೆ. ಪ್ರಜ್ಞಾಪೂರ್ವಕ ಮತ್ತು ಪೂರ್ವನಿಯೋಜಿತ ಶಿಕ್ಷಣವು ಮಾಡಬಹುದಾದುದು ಎಂದರೆ ಹೀಗೆ ರೂಪುಗೊಂಡ ಸಾಮರ್ಥ್ಯವನ್ನು ಸಂಪೂರ್ಣ ಉಪಯೋಗಕ್ಕೆ ಬರುವಂತೆ ಮಾಡುವುದು. ಹಾಗೆ ಮಾಡುವಾಗ ವ್ಯಕ್ತಿತ್ವದ ಒರಟಾದ ಅಂಶಗಳನ್ನು ತೊಡೆದು ವ್ಯಕ್ತಿಗಳಿಗೆ ಅವರ ಚಟುವಟಿಕೆ ಹೆಚ್ಚು ಅರ್ಥವಂತಿಕೆಯನ್ನು ಹೊಮ್ಮಿಸುವಂತೆ ಮಾಡುವುದು.

"ಪರಿಸರದ ಅರಿವಿಗೆ ಬಾರದ ಪ್ರಭಾವ" ಎಷ್ಟು ಸೂಕ್ಷ್ಮ ಮತ್ತು ವ್ಯಾಪಕವಾಗಿದೆಯೆಂದರೆ, ಇದು ನಡತೆ ಮತ್ತು ಮನಸ್ಸಿನ ಪ್ರತಿಯೊಂದು ಎಳೆಯ ಮೇಲೂ ಪ್ರಭಾವ ಬೀರುತ್ತದೆ. ಇದರ ಪ್ರಭಾವ ಯಾವ ನಿರ್ದಿಷ್ಟ ದಿಕ್ಕುಗಳತ್ತ ಅತಿ ಹೆಚ್ಚಾಗಿರುವುದೆಂದು ಗಮನಹರಿಸುವುದು ಯೋಗ್ಯವಾಗುತ್ತದೆ. ಮೊದಲನೆಯದಾಗಿ ಭಾಷೆಯ ಬಳಕೆ. ಮೂಲಭೂತ ವಾಕ್ಶಕ್ತಿ, ಶಬ್ದ ಸಂಪತ್ತು ಇವುಗಳು ಜೀವನದ ಸಾಮಾನ್ಯ ಅಂತರ್‌ವ್ಯವಹಾರಗಳಲ್ಲಿ ರೂಪುಗೊಳ್ಳುತ್ತವೆ ಮತ್ತು ಇವು ಸಾಮಾಜಿಕ ಆವಶ್ಯಕತೆಯಾಗಿ ಮುಂದುವರಿಯುತ್ತವೆಯೇ ಹೊರತೂ ಬೋಧನೆಯ ಸಾಧನವಾಗಿ ಅಲ್ಲ. ಉದಾಹರಣೆಗೆ ಹೇಳಬೇಕೆಂದರೆ ಮಗು ಮಾತೃಭಾಷೆಯನ್ನು ಪಡೆದುಕೊಳ್ಳುತ್ತದೆ. ಈ ರೀತಿಯಲ್ಲಿ ರೂಪುಗೊಂಡ ನುಡಿಯ ಅಭ್ಯಾಸಗಳನ್ನು ಪ್ರಜ್ಞಾಪೂರ್ವಕವಾಗಿ ಕಲಿಸುವುದರ ಮೂಲಕ ತಿದ್ದಬಹುದು ಅಥವ ಬದಲಿಸಬಹುದು. ಆದರೂ ಭಾವೋದ್ವೇಗಕ್ಕೊಳಗಾದಾಗ, ಉದ್ದೇಶ ಪೂರ್ವಕವಾಗಿ ಪಡೆದಂತಹ ನುಡಿಯ ಅಭ್ಯಾಸಗಳು ಹೆಚ್ಚಾಗಿ ಬಿದ್ದುಹೋಗಿ ಬಿಡುತ್ತವೆ, ಮತ್ತು ವ್ಯಕ್ತಿಗಳಲ್ಲಿ ಅವರ ನಿಜವಾದ ಸ್ವಾಭಾವಿಕ ಭಾಷೆ ಮರುಕಳಿಸಿ ಬಿಡುತ್ತದೆ. ಎರಡನೆಯದಾಗಿ ನಡವಳಿಕೆ. ನೈತಿಕ ಬೋಧನೆಗಿಂತ ಉದಾಹರಣೆಗಳೇ, ನಡತೆಯ ಮೇಲ್ಪಂಕ್ತಿಯೇ ಹೆಚ್ಚು ಸಮರ್ಥವೆನ್ನಿಸುತ್ತದೆ. ಮಾವು ಬಿತ್ತಿ ಮಾವು ಪಡೆಯುವಂತೆ, ಉತ್ತಮವಾಗಿ ಬೆಳೆಸುವುದರಿಂದ ಒಳ್ಳೆಯ ನಡವಳಿಕೆ ಬರುತ್ತದೆ; ರೂಢಿಗತ ಉತ್ತೇಜಕಗಳಿಗೆ ಉತ್ತರವಾಗಿರುವ ಪ್ರತಿಕ್ರಿಯೆಗಳ ಮೂಲಕ, ಬೆಳೆಸುವ ರೀತಿ ರೂಢಿಗೊಳ್ಳುತ್ತದೆಯೇ ಹೊರತೂ ಮಾಹಿತಿ ನೀಡುವುದರಿಂದ ಅಲ್ಲ. ಪ್ರಜ್ಞಾಪೂರ್ವಕ ತಿದ್ದುವಿಕೆಯೊಂದಿಗೆ ಕೊನೆ ಇಲ್ಲದಂತೆ ಸೂಚನೆ ನೀಡುತ್ತಲಿದ್ದರೂ, ಅಂತಿಮವಾಗಿ ಸುತ್ತಲಿನ ವಾತಾವರಣ ಮತ್ತು ಮನೋಭಾವವೇ ನಡವಳಿಕೆಯನ್ನು ರೂಪಿಸುವಲ್ಲಿ ಮುಖ್ಯ ಕರ್ತವ್ಯಗಳಾಗುತ್ತವೆ. ನೈತಿಕತೆಯ ಸಣ್ಣ ಪ್ರಮಾಣವೇ ನಡವಳಿಕೆ. ಅದಕ್ಕಿಂತ ಹೆಚ್ಚಾಗಿ, ಪ್ರಜ್ಞಾಪೂರ್ವಕ ಸೂಚನೆಗಳು ಹೆಚ್ಚಿನ

ನೈತಿಕತೆಯ ಮೇಲೆ ಎಷ್ಟು ಪರಿಣಾಮಕಾರಿ ಎಂದರೆ, ಮಗುವಿನ ಸಾಮಾಜಿಕ ವಾತಾವರಣವನ್ನು ರೂಪಿಸುವವರ ನಡೆನುಡಿಗಳೊಂದಿಗೆ ಆ ಸೂಚನೆಗಳು ಹೊಂದುವಷ್ಟು ಮಾತ್ರ. ಮೂರನೆಯದಾಗಿ, ಒಳ್ಳೆಯ ಅಭಿರುಚಿ ಮತ್ತು ಸೌಂದರ್ಯೋಪಾಸನೆ. ಯಾವಾಗಲೂ ಸೊಬಗಿನ ಆಕಾರ ಮತ್ತು ಬಣ್ಣವನ್ನು ಹೊಂದಿರುವ, ಸಮರಸದ ವಸ್ತುಗಳೇ ಕಣ್ಣಿಗೆ ಬೀಳುತ್ತಿದ್ದಲ್ಲಿ, ಸಹಜವಾಗಿಯೇ ಗುಣಮಟ್ಟದ ಅಭಿರುಚಿ ಬೆಳೆಯುತ್ತದೆ. ಥಳುಕಿನ, ಅವ್ಯವಸ್ಥಿತವಾದ ಮತ್ತು ಆಡಂಬರದಿಂದ ಕೂಡಿದ ವಾತಾವರಣದಿಂದಾಗಿ ಅಭಿರುಚಿ ಕ್ಷೀಣಿಸುತ್ತದೆ. ಇದೂ ಸಹ, ಸೌಂದರ್ಯ ಪ್ರಜ್ಞೆ ಇಲ್ಲದ ಬರಡು ಪರಿಸರ ಸೌಂದರ್ಯದ ಕುರಿತಾದ ಹಸಿವೆಯನ್ನೇ ಹಿಂಗಿಸಿ ಬಿಡಬಹುದಾದಂತೆಯೇ ಸರಿ. ಇಂತಹ ಪ್ರತಿಕೂಲತೆಗಳ ಇದಿರು, ಪ್ರಜ್ಞಾಪೂರ್ವಕವಾದ ಕಲಿಸುವಿಕೆ ಇನ್ನೊಬ್ಬರ ಚಿಂತನೆಗಳ ಕುರಿತಾದ ಕೇವಲ ಪರೋಕ್ಷ ಮಾಹಿತಿ ನೀಡುತ್ತದೆ ಅಷ್ಟೆ. ಹಾಗೆ ಕಲಿಕೆಯಿಂದ ಬರುವ ಅಭಿರುಚಿ, ಸಹಜವೂ, ವ್ಯಕ್ತಿತ್ವದಲ್ಲಿ ಹಾಸುಹೊಕ್ಕಾದುದೂ ಆಗದು. ಅದು, ಯಾರನ್ನು ಉನ್ನತ ಅಭಿರುಚಿಯ ಮಾದರಿಗಳು ಎಂದು ನೋಡಲು ಕಲಿಸಿರುತ್ತಾರೋ, ಅಂತಹವರ ಚಿಂತನೆಗಳ ಬರಡು ನೆನಪಿಸುವಿಕೆ ಮಾತ್ರವಾಗುತ್ತದೆ. ಮೌಲ್ಯನಿರ್ಣಯಗಳ ನಿಕಷಗಳು ರೂಪುಗೊಳ್ಳುವುದು ಪದೇ ಪದೇ ವ್ಯಕ್ತಿಯು ತೊಡಗಿಸಿಕೊಳ್ಳುವ ಸಂದರ್ಭಗಳ ಮೂಲಕ ಎಂದು ಹೇಳಿದರೆ ಹೊಸದಾದ ಅಂಶವನ್ನು ಹೇಳಿದಂತಾಗುವುದಿಲ್ಲ. ಇದು ಹಿಂದೆ ಚರ್ಚಿಸಿದ ವಿಚಾರಗಳ ಸಂಯೋಜಿತ ಹೇಳಿಕೆ. ನಾವು ಸಾಮಾನ್ಯವಾಗಿ ಗುರುತಿಸದ ಸಂಗತಿಯೊಂದಿದೆ. ಅದೆಂದರೆ ನಮ್ಮ ಪ್ರಜ್ಞೆ ಯಾವುದು ಯೋಗ್ಯವಾದದ್ದು, ಯಾವುದು ಅಲ್ಲ ಎಂದು ತೀರ್ಮಾನಿಸುವುದರ ಹಿಂದೆ ಅಪ್ರಜ್ಞಾಪೂರ್ವಕ ನಿಕಷಗಳಿರುತ್ತವೆ. ಒಟ್ಟಿನಲ್ಲಿ ಸಾಮಾನ್ಯವಾಗಿ ನಾವು ಯಾವುದನ್ನು ಯಾವುದೇ ವಿಚಾರಿಸುವಿಕೆ ಅಥವಾ ಪರ್ಯಾಲೋಚನೆ ಇಲ್ಲದೇ ಒಪ್ಪಿಕೊಳ್ಳುತ್ತೇವೆಯೋ, ಆ ಸಂಗತಿಗಳೇ ನಮ್ಮ ಪ್ರಜ್ಞಾಪೂರ್ವಕ ಚಿಂತನೆ ಮತ್ತು ತೀರ್ಮಾನಗಳನ್ನು ನಿರ್ಧರಿಸುತ್ತವೆ. ನಮ್ಮ ಚಿಂತನೆಯ ಸ್ತರದಿಂದ ಕೆಳಗಿರುವ ರೂಢದೃಷ್ಟಿಗಳು (habitudes - ಅಭ್ಯಾಸಬಲದ ದೃಷ್ಟಿಕೋನ) ಇತರರೊಂದಿಗಿನ ನಿರಂತರ ಕೊಡುಕೊಳ್ಳುವಿಕೆಯ ಸಂಬಂಧಗಳಲ್ಲಿ ರೂಪುಗೊಂಡತಹವೇ ಆಗಿವೆ.

**4. ವಿಶೇಷ ಪರಿಸರವಾಗಿ ಶಾಲೆ.** ಅನಿಶ್ಚಿತವಾಗಿ ಸಾಗುವ ಶಿಕ್ಷಣದ ಪ್ರಕ್ರಿಯೆಯ ಕುರಿತು ಮುಂಬರುವ ಹೇಳಿಕೆಯ ಪ್ರಾಮುಖ್ಯತೆಯೆಂದರೆ, ಕಿರಿಯರಿಗೆ ಸಿಗುವ ಶಿಕ್ಷಣವನ್ನು ಹಿರಿಯರು ಪ್ರಜ್ಞಾಪೂರ್ವಕವಾಗಿ ನಿಯಂತ್ರಿಸುವ ಮಾರ್ಗವನ್ನು ಅದು ಗಮನಿಸುತ್ತದೆ. ಆ ಮಾರ್ಗ ಎಂದರೆ ಕಿರಿಯರು ಕಾರ್ಯ ನಿರ್ವಹಿಸುವ ಪರಿಸರವನ್ನು, ಆ ಮೂಲಕ ಅವರ ಚಿಂತನೆ ಮತ್ತು ಭಾವನೆಗಳನ್ನು ಹಿರಿಯರು ನಿಯಂತ್ರಿಸುವುದು. ನಾವೆಂದೂ ನೇರವಾಗಿ ಶಿಕ್ಷಣ ನೀಡೆವು. ಆದರೆ ಪರಿಸರವನ್ನು ನಿಯಂತ್ರಿಸುವ ಮೂಲಕ ಪರೋಕ್ಷವಾಗಿ ಶಿಕ್ಷಣ ನೀಡುವೆವು. ಆಕಸ್ಮಿಕವಾಗಿ ಸಿಕ್ಕ ವಾತಾವರಣವನ್ನೇ ಈ ಕಾರ್ಯ ನಿರ್ವಹಿಸಲು ಬಿಡುತ್ತೇವೋ ಅಥವಾ ಶಿಕ್ಷಣದ ಉದ್ದೇಶಕ್ಕಾಗಿಯೇ ವಾತಾವರಣವನ್ನು ನಿರ್ಮಿಸುತ್ತೇವೋ ಅದು ಬಹಳ ನಿರ್ಣಾಯಕವಾಗುತ್ತದೆ. ಶೈಕ್ಷಣಿಕ ಪರಿಣಾಮಕ್ಕೆ ಸಂಬಂಧಪಟ್ಟಂತೆ, ಉದ್ದೇಶಪೂರ್ವಕವಾಗಿ ಹತೋಟಿಯಲ್ಲಿಟ್ಟಿರುವ ಯಾವುದೇ ವಾತಾವರಣವನ್ನು ಹೊರತುಪಡಿಸಿ, ಉಳಿದೆಲ್ಲವೂ ಆಕಸ್ಮಿಕ ವಾತಾವರಣ ಎನಿಸಿಕೊಳ್ಳುತ್ತದೆ. ವಿವೇಕಯುತ ಮತ್ತು ವಿವೇಕರಹಿತ ಕುಟುಂಬಗಳ ಮನೆಯ ವಾತಾವರಣದಲ್ಲಿ ಈ ವ್ಯತ್ಯಾಸವಿರುತ್ತದೆ. ಜಾಣ ಅಥವಾ ವಿವೇಕಯುತ ಮನೆಯ ವಾತಾವರಣದಲ್ಲಿ ಜೀವನದ ಪದ್ಧತಿ ಮತ್ತು ಆಚರಣೆ, ವ್ಯವಹಾರಗಳು ಮಕ್ಕಳ ಬೆಳವಣಿಗೆಯ ಮೇಲಿನ ಅವುಗಳ ಪ್ರಭಾವದ ದೃಷ್ಟಿಯಿಂದ ಆಯ್ಕೆ ಮಾಡಿದವುಗಳಾಗಿರುತ್ತವೆ, ಆ ದೃಷ್ಟಿಯ ಛಾಯೆಯನ್ನು ಹೊಂದಿರುತ್ತವೆ. ಆದರೆ ಶಾಲೆಗಳು ಖಂಡಿತವಾಗಿಯೂ ತನ್ನ ಸದಸ್ಯರ, ಎಂದರೆ ವಿದ್ಯಾರ್ಥಿಗಳ, ಮಾನಸಿಕ ಮತ್ತು ನೈತಿಕ ಸ್ವಭಾವವದ ಮೇಲೆ ಸ್ಪಷ್ಟ ಪ್ರಭಾವ ಬೀರುವಂತಹ ವಾತಾವರಣವನ್ನು ರೂಪಿಸುವ ಮಾದರಿಯ ಸಂದರ್ಭಗಳಾಗುತ್ತವೆ.

ಒಟ್ಟಾರೆ ಹೇಳುವುದಾದರೆ, ಸಾಮಾಜಿಕ ಪರಂಪರೆ ಬಹಳ ಸಂಕೀರ್ಣವಾಗಿದ್ದು, ಸಾಮಾಜಿಕ ಭಂಡಾರದ (ಜ್ಞಾನಸಂಗ್ರಹದ) ಗುರುತರ ಭಾಗವನ್ನು ಬರಹಕ್ಕಿಳಿಸಿ ಬರಹದ ಮೂಲಕ ಅದನ್ನು ಸಂವಹನಗೊಳಿಸಲು ಬದ್ಧವಾಗಿರುವಲ್ಲಿ ಅವು, ಎಂದರೆ ಶಾಲೆಗಳು, ಅಸ್ತಿತ್ವವನ್ನು ಪಡೆಯುತ್ತವೆ. ಬರಹದ ಸಂಕೇತಗಳು ಆಡು ಮಾತುಗಳಿಗಿಂತ ಹೆಚ್ಚು ಕೃತಕ ಮತ್ತು ರೂಢಿಗತವಾಗಿರುತ್ತವೆ; ಅವುಗಳನ್ನು ಬೇರೆಯವರೊಂದಿಗಿನ ಆಕಸ್ಮಿಕ ಸಂಪರ್ಕದಲ್ಲಿ ತಿಳಿದುಕೊಳ್ಳಲಾಗುವುದಿಲ್ಲ. ಅದಲ್ಲದೇ ಬರಹವು ಸಾಮಾನ್ಯವಾಗಿ ನಿತ್ಯಜೀವನಕ್ಕೆ ಹೊರತಾದ ವಿಷಯಗಳನ್ನು ಆರಿಸಿ ದಾಖಲಿಸುತ್ತದೆ. ಪೀಳಿಗೆಯಿಂದ ಪೀಳಿಗೆಗೆ ಒಟ್ಟುಗೂಡಿಸಿದ ಸಾಧನೆಗಳು, ಅವುಗಳಲ್ಲಿ ಕೆಲವು ತಾತ್ಕಾಲಿಕವಾಗಿ ಬಳಕೆಯಲ್ಲಿಲ್ಲದಿದ್ದರೂ, ಅದರಲ್ಲಿ ಶೇಖರಣೆಗೊಳ್ಳುತ್ತವೆ. ಪರಿಣಾಮವಾಗಿ ಒಂದು ಸಮುದಾಯ ತನ್ನ ಭೂಪ್ರದೇಶ ಮತ್ತು ತನ್ನದೇ ಪೀಳಿಗೆಯ ಆಚೆಗೆ ಇರುವುದರ ಮೇಲೆ ಗಣನೀಯ ಪ್ರಮಾಣದಲ್ಲಿ ಅವಲಂಬಿಸಬೇಕು ಎಂದಾದಲ್ಲಿ, ಅದು ಎಲ್ಲ ಸಂಪನ್ಮೂಲದ ಸಂವಹನಕ್ಕಾಗಿ ವ್ಯವಸ್ಥಿತ ಸಂಸ್ಥೆಯಾದ ಶಾಲೆಯನ್ನು ಅವಲಂಬಿಸಬೇಕಾಗುತ್ತದೆ. ಒಂದು ಸ್ಪಷ್ಟ ಉದಾಹರಣೆಗೆ ಪ್ರಾಚೀನ ಗ್ರೀಕರು ಮತ್ತು ರೋಮನ್ನರ ಜೀವನ ನಮ್ಮ ಜೀವನದ ಮೇಲೆ ಗಾಢವಾದ ಪ್ರಭಾವವನ್ನು ಬೀರಿದೆ. ಹಾಗಿದ್ದಾಗ್ಯೂ ಆ ಪ್ರಭಾವದ ಸ್ವರೂಪ ನಮ್ಮ ಸಾಮಾನ್ಯ ಅನುಭವಗಳ ಬಾಹ್ಯಸ್ತರದಲ್ಲಿ ಅರಿವಿಗೆ ಬಾರದು. ಅದೇ ರೀತಿಯಲ್ಲಿ, ನಮ್ಮ ಸಾಮಾಜಿಕ ಸಂಗತಿಗಳಲ್ಲಿ, ಈಗಲೂ ಇರುವ ಆದರೆ ದೂರದಲ್ಲಿರುವ ಬ್ರಿಟಿಷ್, ಜರ್ಮನ್, ಇಟಲಿಯನ್ನರ ನೇರ ಭಾಗವಹಿಸುವಿಕೆಯಿದೆ. ಆದರೆ ಸ್ಪಷ್ಟ ವಿವರಣೆ ಮತ್ತು ಗಮನವಿಲ್ಲದಿದ್ದರೆ ಆ ಒಡನಾಟದ ರೀತಿಯನ್ನು ಅರ್ಥಮಾಡಿಕೊಳ್ಳುವುದು ಕಷ್ಟವಾಗುತ್ತದೆ. ಒಟ್ಟಿನಲ್ಲಿ ಅದೇ ರೀತಿಯಲ್ಲಿ, ದೂರದ ದೈಹಿಕ ಶಕ್ತಿಗಳು ಮತ್ತು ಕಣ್ಣಿಗೆ ಕಾಣದ ರಚನೆಗಳು ನಮ್ಮ ಚಟುವಟಿಕೆಗಳ ಮೇಲೆ ಬೀರುವ ಪರಿಣಾಮವನ್ನು ನಮ್ಮ ದೈನಂದಿನ ಸಹಯೋಗದಿಂದ ಕಿರಿಯರಿಗೆ ಮನವರಿಕೆ ಮಾಡಿಕೊಡುವುದು ಅಸಾಧ್ಯವಾಗುತ್ತದೆ. ಆದುದರಿಂದ ಆ ವಿಷಯಗಳತ್ತ ಗಮನ ನೀಡಲು ಸ್ಥಾಪಿಸಲಾಗಿರುವ ಸಾಮಾಜಿಕ ಸಂಪರ್ಕದ, ಸಂವಹನದ ಒಂದು ವಿಶೇಷ ವ್ಯವಸ್ಥೆಯೇ ಶಾಲೆ.

ಜೀವನದ ಸಾಮಾನ್ಯ ಒಡನಾಟಗಳಿಗೆ ಹೋಲಿಸಿದರೆ ಈ ರೀತಿಯ ಸಂಸ್ಥೆಯು ನಿರ್ದಿಷ್ಟವಾದ ಮೂರು ಕಾರ್ಯಗಳನ್ನು ಹೊಂದಿರುವುದನ್ನು ಗುರುತಿಸಬಹುದು. ಮೊದಲನೆಯದಾಗಿ ಸಂಕೀರ್ಣ ನಾಗರೀಕತೆಯನ್ನು ವಿಶದವಾಗಿ ಅರ್ಥೈಸಿಕೊಳ್ಳುವುದು ಬಹಳ ಕ್ಲಿಷ್ಟಕರವಾದದ್ದು. ಅದನ್ನು ವಿಭಾಗಗಳಾಗಿ ವಿಂಗಡಿಸಿ, ವರ್ಗೀಕರಣಕ್ಕೆ ಅನುಗುಣವಾಗಿ, ಕ್ರಮೇಣ ಸ್ವಲ್ಪ ಸ್ವಲ್ಪವಾಗಿ ಅರ್ಥೈಸಿಕೊಳ್ಳಬೇಕಾಗುತ್ತದೆ. ನಮ್ಮ ಈಗಿನ ಸಾಮಾಜಿಕ ಜೀವನದ ಸಂಬಂಧಗಳು ಬಹಳವಾಗಿದ್ದು ಒಂದಕ್ಕೊಂದು ಎಷ್ಟು ಹೊಸೆದುಕೊಂಡಿವೆ ಎಂದರೆ ಅದರಲ್ಲಿ ಒಂದು ಅನುಕೂಲಕರ ಸ್ಥಾನದಲ್ಲಿರುವ ಮಗುವಿಗೂ ಉಳಿದ ಹಲವಾರು ಪ್ರಮುಖ ಸಂಬಂಧಗಳೊಡನೆ ಸುಲಭವಾಗಿ ಪಾಲ್ಗೊಳ್ಳುವುದು ಸಾಧ್ಯವಾಗದು. ಹಾಗೆ ಪಾಲ್ಗೊಳ್ಳುವುದು ಅಸಾಧ್ಯ ಎಂದಾದಲ್ಲಿ ಆ ಸಂಬಂಧಗಳ ಅರ್ಥವನ್ನು ತಿಳಿಸುವುದೂ ಅಸಾಧ್ಯವಾಗುತ್ತದೆ, ಹಾಗಾಗಿ ಅದು ಆತನ ಮಾನಸಿಕ ತಿಳುವಳಿಕೆಯ ಭಾಗವಾಗುವುದಿಲ್ಲ. ಇದು ಕಾಡಿನಿಂದಾಗಿ ಮರಗಳನ್ನು ನೋಡದಿರುವಂತೆ. ವ್ಯಾಪಾರ, ರಾಜಕೀಯ, ಕಲೆ, ವಿಜ್ಞಾನ, ಧರ್ಮ ಇವೆಲ್ಲವುಗಳೂ ಒಮ್ಮೆಲೇ ಗಮನ ಸೆಳೆಯಲು ಹೊರಟಾಗ ಗೊಂದಲ ಮಾತ್ರ ಉಂಟಾಗಲು ಸಾಧ್ಯ. ಶಾಲೆ ಎನ್ನುವ ಸಾಮಾಜಿಕ ಅಂಗದ ಮೊದಲ ಕೆಲಸವೇ ಸರಳಗೊಳಿಸಿದ ವಾತಾವರಣವನ್ನು ಒದಗಿಸುವುದು. ಶಾಲೆಯು ತಕ್ಕಮಟ್ಟಿಗೆ ಮೂಲಭೂತವಾಗಿರುವ ಮತ್ತು ಚಿಕ್ಕವರು ಪ್ರತಿಕ್ರಿಯಿಸುವ ಸಾಮರ್ಥ್ಯವನ್ನು ಹೊಂದಿರಬಹುದಾದ ಲಕ್ಷಣಗಳನ್ನೇ ಆಯ್ಕೆ ಮಾಡಿ-ಕೊಳ್ಳುತ್ತದೆ. ನಂತರ ಅದು ಮೊದಲು ಪಡೆದ ವಿಷಯಗಳ ಆಧಾರದ ಮೇಲೆ ಜಟಿಲವಾದದ್ದಕ್ಕೆ ಒಳನೋಟವನ್ನು ಪಡೆದು ಮುಂದುವರೆಯುವ ಪದ್ಧತಿಯನ್ನು ಅಳವಡಿಸುತ್ತದೆ.

ಎರಡನೆಯದಾಗಿ, ಮಕ್ಕಳ ಮನಸ್ಸಿನ ಸ್ವಭಾವದ ಮೇಲೆ ಪ್ರಭಾವ ಬೀರಬಹುದಾದ, ಈಗಿನ ವಾತಾವರಣದಲ್ಲಿರುವ ಯೋಗ್ಯವಲ್ಲದ ಲಕ್ಷಣಗಳನ್ನು ಸಾಧ್ಯವಾದ ಮಟ್ಟಿಗೆ ತೆಗೆದುಹಾಕಬೇಕಾಗಿರುವುದು ಶಾಲೆಗಳು ಮಾಡಬೇಕಾದ ಮುಖ್ಯ ಕೆಲಸವಾಗಿದೆ. ಇದು ಶುದ್ಧವಾದ ಕ್ರಿಯೆಯ ಮಾಧ್ಯಮವನ್ನು ಹುಟ್ಟುಹಾಕುತ್ತದೆ. ಆಯ್ಕೆಯ ಗುರಿ ಸರಳೀಕರಿಸುವುದೊಂದೇ ಅಲ್ಲ, ಅನಪೇಕ್ಷಿತವಾದುದನ್ನು ತೆಗೆದುಹಾಕುವುದೂ ಹೌದು. ಪ್ರತಿಯೊಂದು ಸಮಾಜವೂ ಕ್ಷುಲ್ಲಕವಾದ, ಗತಕಾಲದ ನಿಷ್ಪ್ರಯೋಜಕ ಅವಶೇಷವಾದ, ಮತ್ತು ತರ್ಕಹೀನ ಮತ್ತು ವಿಕೃತವಾದ ಸಂಗತಿಗಳಲ್ಲಿ ಸಿಲುಕಿಕೊಂಡಿರುತ್ತದೆ. ತಾನು ನೀಡುವ ಪರಿಸರದಿಂದ ಈ ವಿಚಾರಗಳನ್ನು ತೆಗೆದು ಹಾಕುವ ಹಾಗೂ ಆ ಮೂಲಕ ಸಾಮಾನ್ಯ ಸಾಮಾಜಿಕ ಪರಿಸರದಲ್ಲಿ ಅವುಗಳ ಪ್ರಭಾವವನ್ನು ತಟಸ್ಥಗೊಳಿಸುವ ಕರ್ತವ್ಯ ಶಾಲೆಯದಾಗಿದೆ. ತನ್ನ ವಿಶೇಷ ಉಪಯೋಗಕ್ಕಾಗಿ ಅತ್ಯುತ್ತಮವಾದುದನ್ನು ಆರಿಸುವ ಮೂಲಕ, ಅದು ತನ್ನ ಶ್ರೇಷ್ಠತೆಯ ಶಕ್ತಿಯನ್ನು ಬಲಪಡಿಸಲು ಶ್ರಮಿಸುತ್ತದೆ. ಸಮಾಜವು ಪ್ರಬುದ್ಧವಾದಂತೆ, ತನ್ನೆಲ್ಲ ಪ್ರಸ್ತುತ ಸಾಧನೆಗಳನ್ನು ಸಂವಹನ ಮಾಡಿ ಸಂರಕ್ಷಿಸುವುದು ಅದರ ಜವಾಬ್ದಾರಿಯಲ್ಲ, ಅದರ ಜವಾಬ್ದಾರಿ ಉತ್ತಮವಾದ ಭವಿಷ್ಯದ ಸಮಾಜಕ್ಕೆ ದಾರಿ ಮಾಡಿಕೊಡುವುದು ಎಂದು ಅದು ಅರಿಯುತ್ತದೆ. ಈ ಗುರಿಯನ್ನು ತಲುಪಲು ಶಾಲೆಯೇ ಅದರ ಮುಖ್ಯ ಕ್ರಿಯಾಸಾಧನವಾಗಿದೆ.

ಮೂರನೆಯದಾಗಿ, ಶಾಲೆಯ ಪರಿಸರದ ಕಾರ್ಯವೆಂದರೆ ಸಾಮಾಜಿಕ ಪರಿಸರದಲ್ಲಿರುವ ವಿವಿಧ ಅಂಶಗಳನ್ನು ಸಮತೋಲನಗೊಳಿಸುವುದು ಹಾಗೂ ಪ್ರತಿಯೊಬ್ಬ ವ್ಯಕ್ತಿಯೂ ತಾನು ಹುಟ್ಟಿಬಂದ ಸಾಮಾಜಿಕ ಗುಂಪಿನ ಮಿತಿಗಳನ್ನು ದಾಟಿ ವಿಶಾಲವಾದ ಪರಿಸರದೊಡನೆ ಜೀವಂತ ಸಂಪರ್ಕವನ್ನು ಹೊಂದಲು ಅವಕಾಶವನ್ನು ಕಲ್ಪಿಸುವುದು. "ಸಮಾಜ", "ಸಮುದಾಯ"ದಂತಹ ಶಬ್ದಗಳು ಆ ಶಬ್ದಗಳ ಏಕೈಕ ಅರ್ಥಗಳನ್ನು ನಮ್ಮಲ್ಲಿ ಮೂಡಿಸುವ ಮೂಲಕ ನಮ್ಮನ್ನು ತಪ್ಪುದಾರಿಗೆ ಎಳೆಯುವುದು ಸಾಧ್ಯ. ವಾಸ್ತವವಾಗಿ ಹೇಳಬೇಕೆಂದರೆ, ಆಧುನಿಕ ಸಮಾಜವು ಹಲವು ಸಮಾಜಗಳ ಸಡಿಲವಾದ ಒಟ್ಟು ಸೇರುವಿಕೆ. ಪ್ರತಿಯೊಂದು ಕುಟುಂಬದ ಹತ್ತಿರದ ಗೆಳೆಯರ ವಿಸ್ತೃತ ರೂಪವೇ ಒಂದು ಸಮಾಜವನ್ನು ನಿರ್ಮಿಸುತ್ತದೆ; ಒಂದು ಹಳ್ಳಿ ಅಥವ ಒಂದು ಓಣಿಯ ಆಟಗಾರರ ಗುಂಪು ಸಮುದಾಯವಾಗುತ್ತದೆ; ವ್ಯಾಪಾರದ ಪ್ರತಿಯೊಂದು ಗುಂಪುಗಳು, ಪ್ರತಿಯೊಂದು ಸಂಸ್ಥೆಯೂ ಸಮುದಾಯಗಳಾಗುತ್ತವೆ. ಇಂತಹ ಆತ್ಮೀಯ ಗುಂಪುಗಳ ಆಚೆಗೆ ನಮ್ಮಂತಹ ದೇಶದಲ್ಲಿ ವಿವಿಧ ಜನಾಂಗಗಳು, ಧಾರ್ಮಿಕ ಪಂಗಡಗಳು, ಆರ್ಥಿಕ ವರ್ಗವಿಂಗಡನೆಗಳಿವೆ. ಇಂದಿನ ಒಂದು ಆಧುನಿಕ ನಗರದಲ್ಲಿ,ನಾಮರೂಪದ

(nominal- ಹೆಸರಿನಲ್ಲಿರುವ, ಕೇವಲ ಹೆಸರಿಗಷ್ಟೇ ಇರುವ) ರಾಜಕೀಯ ಏಕತೆಯಿದ್ದರೂ, ಹಿಂದಿನ ಕಾಲದಲ್ಲಿ ಬಹುಶಃ ಒಂದು ಇಡೀ ಖಂಡದಲ್ಲಿ ಇದ್ದುದಕ್ಕಿಂತಲೂ ಹೆಚ್ಚು ಸಮುದಾಯಗಳಿವೆ; ವಿಭಿನ್ನ ಆಚರಣೆಗಳು, ಸಂಪ್ರದಾಯಗಳು, ಆಕಾಂಕ್ಷೆಗಳು, ಆಡಳಿತಾತ್ಮಕ (ಸರಕಾರದ) ನಿಯಂತ್ರಣದ ರಚನೆಗಳು, ಸ್ವರೂಪಗಳು ಇವೆ.

ಅಂತಹ ಪ್ರತಿಯೊಂದು ಗುಂಪೂ ತನ್ನ ಸದಸ್ಯರ ಸಕ್ರಿಯ ಮನೋಧರ್ಮದ ಮೇಲೆ ರೂಪಾತ್ಮಕ (formative) ಪ್ರಭಾವವನ್ನು ಬೀರುತ್ತದೆ. ಒಂದು ಚರ್ಚ್, ಕಾರ್ಮಿಕ ಸಂಘ, ವ್ಯಾಪಾರ ಸಹಭಾಗಿತ್ವ ಅಥವ ಒಂದು ರಾಜಕೀಯ ಪಕ್ಷ, ಸಾಮೂಹಿಕ ಅಥವ ಜಂಟೀ ಚಟುವಟಿಕೆಗಳಲ್ಲಿ ಭಾಗವಹಿಸಿದಾಗ ತಮ್ಮ ಸದಸ್ಯರಿಗೆ ಕಲಿಯಲು ಅವಕಾಶವಿರುವ ವಾತಾವರಣವನ್ನು ಯಾವ ರೀತಿಯಲ್ಲಿ, ಎಷ್ಟು ನಿಷ್ಠೆಯಿಂದ ಒದಗಿಸುವವೋ, ಅದೇ ರೀತಿಯ ಕಲಿಕೆಯ ವಾತಾವರಣವನ್ನು ಒಂದು ಸಂಚುಕೂಟ, ಕ್ಲಬ್, ದುಷ್ಟರಕೂಟ, ಕಳ್ಳವ್ಯಾಪಾರಿಯ ಅಥವಾ ಕಳ್ಳರ ಮನೆ ಮತ್ತು ಜೈಲಿನಸೆರೆ ಯಾಳುಗಳ ಸಮೂಹ ಒದಗಿಸುತ್ತವೆ. ಇಲ್ಲಿರುವ ಪ್ರತಿಯೊಂದೂ, ಒಂದು ರಾಜ್ಯ, ನಗರ, ಒಂದು ಕುಟುಂಬದAತೆ ಸಹಯೋಗದ ಅಥವಾ ಸಾಮುದಾಯಿಕ ಜೀವನದ ವಿಧಾನಗಳೇ ಆಗಿವೆ. ಅಲ್ಲದೇ ಸದಸ್ಯರಲ್ಲಿ

ನೇರ ಸಂಪರ್ಕವಿರದೇ ಇರುವ ಅಥವಾ ಅತ್ಯಂತ ಕಡಿಮೆ ಸಂಪರ್ಕ ಇರುವಂತಹ ಕಲಾವಿದರ ಸಂಘ, ಬರಹಗಾರರ ಸಮುದಾಯ, ವಿಶ್ವದಾದ್ಯಂತ ಹರಡಿರುವ ವೃತ್ತಿಪರ ವಿದ್ಯಾವಂತ ವರ್ಗ ಇಂತಹ ಸಮುದಾಯಗಳಿವೆ. ಈ ಸಮುದಾಯಗಳ ಸದಸ್ಯರಿಗೆ ಸಾಮಾನ್ಯ ಗುರಿಗಳಿದ್ದು ಬೇರೆಯವರು ಏನು ಮಾಡುತ್ತಿದ್ದಾರೆ ಎನ್ನುವ ಎಚ್ಚರದಲ್ಲಿ ಪ್ರತಿಯೊಬ್ಬ ಸದಸ್ಯನ ಚಟುವಟಿಕೆಗಳು ಮಾರ್ಪಾಡಾಗುತ್ತವೆ.

ಹಿಂದಿನ ಕಾಲದಲ್ಲಿ, ಪಂಗಡಗಳ ವೈವಿಧ್ಯತೆ ಹೆಚ್ಚಾಗಿ ಭೌಗೋಳಿಕ ಆಧಾರದ ಮೇಲಿತ್ತು. ಹಲವು ಸಮಾಜಗಳಿದ್ದು ಪ್ರತಿಯೊಂದೂ, ಹೋಲಿಸಿ ನೋಡಿದಲ್ಲಿ, ತನ್ನದೇ ಪ್ರದೇಶದಲ್ಲಿ ಸಾಮಾನ್ಯವಾಗಿ ಏಕರೂಪದಿಂದಿರುತ್ತಿದ್ದವು. ಆದರೆ ವಾಣಿಜ್ಯ, ಸಾರಿಗೆ, ಮತ್ತು ಪರಸ್ಪರಸಂಪರ್ಕಗಳ ಅಭಿವೃದ್ಧಿಯಿಂದಾಗಿ ಹಾಗೂ ವಲಸೆಯ ಪ್ರಕ್ರಿಯೆಯಿಂದಾಗಿ ಅಮೆರಿಕಾ ಸಂಯುಕ್ತ ಸಂಸ್ಥಾನದಂತಹ ದೇಶಗಳು ವಿವಿಧ ಸಾಂಪ್ರದಾಯಿಕ ಆಚಾರಗಳಿರುವ ವಿವಿಧ ಪಂಗಡಗಳ ಸಂಯೋಗದಿಂದ ರಚನೆಯಾಗಿವೆ. ಬಹುಶಃ ಈ ಪರಿಸ್ಥಿತಿಯು, ಬೇರೆಲ್ಲ ಕಾರಣಗಳಿಗಿಂತ ಮಿಗಿಲಾಗಿ, ಕಿರಿಯರಿಗೆ ಏಕರೂಪದ ಮತ್ತು ಸಮತೋಲನದಿಂದ ಕೂಡಿದ ವಾತಾವರಣವನ್ನು ಒದಗಿಸುವ ಶೈಕ್ಷಣಿಕ ಸಂಸ್ಥೆಗಳ ಬೇಡಿಕೆಗೆ ಕಾರಣವಾಯಿತು. ಕೇವಲ ಈ ರೀತಿಯಲ್ಲಿ ಮಾತ್ರ ಒಂದೇ ರಾಜಕೀಯ ಘಟಕದಲ್ಲಿ ಒತ್ತಟ್ಟಿಗಿರುವ ವಿಭಿನ್ನ ಪಂಗಡಗಳ ಕೇಂದ್ರಾಪಗಾಮೀ (centrifugal- ಒಂದು ಕೇಂದ್ರದಿಂದ ದೂರದೂರ ಸಿಡಿದು ಹೋಗುವ) ಒತ್ತಡಗಳನ್ನು ಎದುರಿಸಬಹುದು. ವಿವಿಧ ಜನಾಂಗಗಳ, ವಿವಿಧ ಧರ್ಮಗಳ ಮತ್ತು ವಿಭಿನ್ನವಾದ ಸಂಪ್ರದಾಯವನ್ನು ಹೊಂದಿರುವ ಯುವಜನತೆ ಶಾಲೆಯಲ್ಲಿ ಪರಸ್ಪರ ಬೆರೆತಾಗ, ಎಲ್ಲರಿಗೂ ಒಂದು ಹೊಸದಾದ ವಿಶಾಲಪರಿಸರ ನಿರ್ಮಾಣವಾಗುತ್ತದೆ. ಸಮಾನ ವಿಷಯವು ಎಲ್ಲರನ್ನೂ ದೃಷ್ಟಿಕೋನದ ಏಕತೆಗೆ ಒಗ್ಗಿಸುತ್ತದೆ. ಯಾವುದೇ ಪಂಗಡದ ಸದಸ್ಯರು ಪ್ರತ್ಯೇಕವಾಗಿದ್ದ ಕಾಲದಲ್ಲಿ ಕಾಣುವುದಕ್ಕಿಂತ ವಿಶಾಲವಾದ ದಿಗಂತದ ಈ ದೃಷ್ಟಿಕೋನವನ್ನು ಶಾಲೆಯು ಅವರಲ್ಲಿ ರೂಢಿಗತಗೊಳಿಸುತ್ತವೆ. ಅಮೆರಿಕೆಯ ಪಬ್ಲಿಕ್ ಶಾಲೆಗಳ ಒಳಗೊಳ್ಳುವಿಕೆಯ ಶಕ್ತಿಯೇ ಇಂತಹ ಸಮಾನವಾದ ಮತ್ತು ಸಮತೋಲನದ, ಐಕ್ಯ ದೃಷ್ಟಿಕೋನದ ಯಶಸ್ಸಿಗೆ ಸ್ಪಷ್ಟ ಸಾಕ್ಷಿಯಾಗಿದೆ.

ವ್ಯಕ್ತಿಯು ಪ್ರವೇಶಿಸುವ ವಿವಿಧ ಸಾಮಾಜಿಕ ವಾತಾವರಣಗಳ ವಿಭಿನ್ನ ಪ್ರಭಾವಗಳನ್ನು, ಪ್ರತಿಯೊಬ್ಬ ವ್ಯಕ್ತಿಯ ಸ್ವಭಾವಕ್ಕೆ ಅನುಗುಣವಾಗುವಂತೆ ಹೊಂದಾಣಿಕೆ ಮಾಡಿಕೊಡುವ ಕರ್ತವ್ಯವೂ ಶಾಲೆಯ ಮೇಲಿದೆ. ಒಂದು ರೀತಿಯ ಸಂಹಿತೆ ಕುಟುಂಬದಲ್ಲಿ ಆಚರಣೆಯಲ್ಲಿರಬಹುದು, ಹೊರಗಡೆಗೆ ರಸ್ತೆಯಲ್ಲಿ ಮತ್ತೊಂದು ಬಗೆ ಇರಬಹುದು, ಮೂರನೆಯದು ಕಾರ್ಖಾನೆ ಅಥವ ಅಂಗಡಿಯಲ್ಲಿರಬಹುದು, ಧಾರ್ಮಿಕ ಸಂಘಟನೆಗಳಲ್ಲಿ ನಾಲ್ಕನೆಯ ಬಗೆ ಪ್ರಚಲಿತವಾಗಿರಬಹುದು. ವ್ಯಕ್ತಿ ಒಂದು ವಾತಾವರಣದಿಂದ ಇನ್ನೊಂದಕ್ಕೆ ದಾಟಿಹೋದಾಗ, ಆತ ಪರಸ್ಪರ ವಿರೋಧಗಳ ಸೆಳೆತಕ್ಕೆ ಒಳಗಾಗಬಹುದು. ಹಾಗಾದಾಗ ವಿವಿಧ ಸಂದರ್ಭಗಳಿಗೆ ಪ್ರತ್ಯೇಕವಾದ ಭಾವನಾತ್ಮಕ ಮತ್ತು ವಿವೇಚನಾತ್ಮಕ ಮಾನದಂಡಗಳನ್ನು ಹೊಂದುವ ಅಪಾಯವಿರುತ್ತದೆ. ಈ ಅಪಾಯವೇ ಶಾಲೆಗಳ ಮೇಲೆ ಒಂದು ಜವಾಬ್ದಾರಿಯನ್ನು ಹೊರಿಸುತ್ತದೆ. ಅದೆಂದರೆ ಶಿಕ್ಷಣಾರ್ಥಿಗಳನ್ನು ಅಲ್ಲಿಯ ಪರಿಸರದಲ್ಲಿ ಸದೃಢವಾಗಿಸುವ ಮತ್ತು ಒಂದುಗೂಡಿಸುವ ಕಾರ್ಯ.

**ಸಾರಾಂಶ.** ಸಮಾಜದ ನಿರಂತರ ಮತ್ತು ಪ್ರಗತಿಪರ ಜೀವನಕ್ಕಾಗಿ ಕಿರಿಯರಲ್ಲಿ ಬೆಳೆಯಬೇಕಾದ ಮನೋವೃತ್ತಿ ಮತ್ತು ಸ್ವಭಾವಗಳನ್ನು ನಂಬಿಕೆ, ಭಾವನೆ ಮತ್ತು ಜ್ಞಾನದ ನೇರ ಸಂವಹನೆಯಿಂದ ಬೆಳೆಸಲು ಆಗುವುದಿಲ್ಲ. ಇದು ಪರಿಸರದ ಮಧ್ಯಸ್ಥಿಕೆಯಿಂದ ಸಾಧ್ಯವಾಗುತ್ತದೆ. ಪರಿಸರವು ಮಾನವನ ಮೂಲಭೂತ ಚಟುವಟಿಕೆಗಳನ್ನು ನಿರ್ವಹಿಸಲಿಕ್ಕೆ ಸಂಬಂಧಿಸಿದ ಒಟ್ಟಾರೆ ಪರಿಸ್ಥಿತಿಯನ್ನು ಒಳಗೊಂಡಿರುತ್ತದೆ. ಸಾಮಾಜಿಕ ಪರಿಸರವು ಯಾವುದೇ ಒಬ್ಬ ಸದಸ್ಯನು ತನ್ನ ಚಟುವಟಿಕೆಗಳನ್ನು ನಡೆಸಿಕೊಂಡು ಹೋಗಲು ಅಗತ್ಯವಾಗುವ, ಅವನ ಸಹಜೀವಿಗಳು ನಡೆಸುವ ಎಲ್ಲಾ ಚಟುವಟಿಕೆಗಳನ್ನು ಒಳಗೊಂಡಿದೆ.

ಜೊತೆಗೂಡಿ ಮಾಡುವ ಕೆಲವು ಚಟುವಟಿಕೆಗಳಲ್ಲಿ ವ್ಯಕ್ತಿಯೋರ್ವ ಎಷ್ಟರ ಮಟ್ಟಿಗೆ ಭಾಗವಹಿಸುತ್ತಾನೆ ಎನ್ನುವುದು ಪರಿಣಾಮದಲ್ಲಿ ಬೋಧಪ್ರದ(educative) ವಾಗಿರುತ್ತದೆ. ಜತೆಗೂಡಿ ಮಾಡುವ ಚಟುವಟಿಕೆಗಳಲ್ಲಿ ಆತ ತನ್ನ ಪಾಲಿನದನ್ನು ಮಾಡುವ ಮೂಲಕ, ಆ ವ್ಯಕ್ತಿ ಆ ಚಟುವಟಿಕೆಯನ್ನು ಪ್ರೇರಿಸುವ ಉದ್ದೇಶವನ್ನು ತನ್ನದಾಗಿಸಿಕೊಳ್ಳುತ್ತಾನೆ. ಅದರ ವಿಧಾನಗಳ ಮತ್ತು ವಿಷಯಗಳ ಪರಿಚಯ ಹಾಗೂ ಅಗತ್ಯ ಪರಿಣತಿಯನ್ನು ಪಡೆಯುತ್ತಾನೆ. ಆ ಚಟುವಟಿಕೆಯ ಭಾವನಾತ್ಮಕ ಸ್ಫೂರ್ತಿಯನ್ನು ತನ್ನಲ್ಲಿ ತುಂಬಿಕೊಳ್ಳುತ್ತಾನೆ.

ಕಿರಿಯರು ತಮಗೆ ಸಂಬಂಧಿಸಿದ ಹಲವಾರು ಗುಂಪುಗಳ ಚಟುವಟಿಕೆಗಳಲ್ಲಿ ಕ್ರಮೇಣ ಭಾಗವಹಿಸಿದಾಗ, ಪ್ರಜ್ಞಾಪೂರ್ವಕ ಉದ್ದೇಶಗಳಿಲ್ಲದೇ, ಗಾಢವಾದ ಮತ್ತು ಆತ್ಮೀಯವಾದ ಮನೋಧರ್ಮವು ಶೈಕ್ಷಣಿಕವಾಗಿ ನಿರ್ಮಾಣವಾಗುತ್ತದೆ. ಸಮಾಜವು ಸಂಕೀರ್ಣಗೊಳ್ಳುತ್ತಾ ಹೋದಂತೆ, ಕಿರಿಯರ ಸಾಮರ್ಥ್ಯವನ್ನು ಪೋಷಿಸುವಂತಹ ವಿಶೇಷ ಸಾಮಾಜಿಕ ವಾತಾವರಣವನ್ನು ಒದಗಿಸುವುದು ಆವಶ್ಯಕವೆಂದು ಕಂಡುಬಂದಿದೆ. ಈ ವಿಶೇಷ ವಾತಾವರಣದ ಮೂರು ಮುಖ್ಯವಾದಂತಹ ಕಾರ್ಯಗಳೆಂದರೆ: ಅದು ಬೆಳೆಸಲು ಉದ್ದೇಶಿಸಿದಂತಹ ಸ್ವಭಾವದ ಅಂಶಗಳನ್ನು ಸರಳೀಕೃತಗೊಳಿಸಿ ಸುವ್ಯವಸ್ಥಿಗೊಳಿಸುವುದು; ಪ್ರಸ್ತುತವಿರುವ ಸಾಮಾಜಿಕ ಆಚರಣೆಗಳನ್ನು ಶುದ್ಧಗೊಳಿಸುವುದು ಮತ್ತು ಆದರ್ಶೀಕರಿಸುವುದು; ಕಿರಿಯರನ್ನು ಅವರಷ್ಟಕ್ಕೇ ಬಿಟ್ಟರೆ ಅವರು ಪ್ರಭಾವಕ್ಕೊಳಪಡುವ ವಾತಾವರಣಕ್ಕಿಂತ, ವಿಶಾಲವಾದ ಮತ್ತು ಸಮತೋಲನದಿಂದ ಕೂಡಿದ ವಾತಾವರಣವನ್ನು ನಿರ್ಮಿಸುವುದು.

********